# ಮಾನಸಿ

ತಿಂಗಳ ಪತ್ರಿಕೆ ಸಂಪುಟ: ೧ ಸಂಚಿಕೆ: ೧



ಕಮಲಾದೇವಿ ಚಟ್ಟೋಪಾಧ್ಯಾಯ

## ಮಾನಸ

ಸಂಪುಟ : ೨ ಸಂಚಿಕೆ : ೨
ಮಾರ್ಚಿ ೧೯೮೯

**ಸಂಪಾದಕೀಯ ಮಂಡಳಿ**
ರಾಜೇಶ್ವರಿ ಎಚ್ ಎಸ್; ಸರಸ್ವತಿ ದು,
ಚಂಪಾವತಿ ಎಚ್. ಎಸ್, ವೇದ,
ಸವಿತ ಎ. ಗೀತಾ ಜಿ. ಎಸ್.

**ಸಲಹೆ—ಸಹಕಾರ**
ವಿಜಯ



**ವಿಳಾಸ "ಮಾನಸ ತಿಂಗಳ ಪತ್ರಿಕೆ"**
ಪಂಚಾಯತಿ ರಸ್ತೆ
ಕಾಡುಗೋಡಿ ( ಪೋ )
ಬೆಂಗಳೂರು—560-067.



**ಸೂಚನೆ :** ವಾರ್ಷಿಕ ಚಂದಾ : **15**ರೂ
ಆಜೀವ ಚಂದಾ **250** ರೂ.
ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು.
ಹಣವನ್ನು ಬಾಂಕ್ಯ್ ಡ್ರಾಫ್ಟ್, ಎಂ. ಓ.
ಮೂಲಕ ಸ್ವೀಕರಿಸಲಾಗುವುದು.


ಈ ಸಂಚಿಕೆಯಲ್ಲಿ............



# ಸಂಪಾದಕೀಯ

ತುಂಬು ಬದುಕು ನಡೆಸಿದ ಕಮಲಾದೇವಿ ಕನಸುಗಳ ಹಿಂದೆ ಬಿಟ್ಟು ಕಾಲಗರ್ಭದಲ್ಲಿ ಕಣ್ಮರೆಯಾಗಿದ್ದಾರೆ.

ಈಕೆಯ ಬದುಕು ಮಹಾಸಾಗರದಂತೆ. ಬಿಂದು, ಬಿಂದುಗಳ ಕೂಡಿಸಿಕೊಂಡು ಬದುಕಿನ ಮಹತ್ತರ ಸ್ತರಗಳಿಗೆ ಮಿಡಿದ ಈಕೆ ಕಂಡ ಇತಿಹಾಸದ ಮಜಲುಗಳು ಹಲವಾರು, ಕೂಡಿಕೊಂಡ ಕವಲುಗಳು ಸಾವಿರಾರು. ಬದುಕನ್ನು ಶ್ರೀಮಂತವಾಗಿ ಪ್ರೀತಿಸಿದ ಈಕೆ ಮನುಷ್ಯರೊಡನೆ ಮಧುರವಾಗಿ ಒಡನಾಡಿದ ಹಾಗೆ ಹೂವು. ಹಸುಗಳ ಜೊತೆಗೂ ಅಂತರಾಳದ ಬಾಂಧವ್ಯ ಇಟ್ಟುಕೊಂಡವರು.

ರವೀಂದ್ರನಾಥಟ್ಯಾಗೋರ್ ರಂತಹ ಕವಿಗಳಿಂದ ಹಿಡಿದು, ಆನಂದಕುಮಾರ ಸ್ವಾಮಿಯವರಂತಹ ತತ್ವ ಶಾಸ್ತ್ರಜ್ಞರೊಡನೆ ಒಡನಾಡಿದ ಈಕೆ ಗಾಂಧಿ, ನೆಹರು, ಪಟೇಲರಂತಹ ತಮ್ಮ ರಾಜಕೀಯ ಬಂಧುಗಳೊಡನೆ ರಾಜಕೀಯ ಸ್ವಾತಂತ್ರ್ಯ ಸಮರದಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡವರು. ಬಂಧುತ್ವವಿದ್ದರೂ, ತಮಗೆ ಸರಿಕಂಡ ನಿಲುವುಗಳಿಗೆ ಬದ್ಧರಾಗುವಂತಹ ಸಂದರ್ಭಗಳಲ್ಲಿ ತಮ್ಮ ವ್ಯಕ್ತಿತ್ವವನ್ನು ಪರಿಪೂರ್ಣವಾಗಿ ಸಮರ್ಥಿಸಿಕೊಂಡು ನಿಂತವರು. ಉದಾಹರಣೆಗೆ, ದಂಡಿಯಾತ್ರೆಯಲ್ಲಿ ಮಹಿಳೆಯರ ಸಕ್ರಿಯ ಪಾತ್ರಕ್ಕಾಗಿ ಗಾಂಧೀಜಿಯವರ ಜೊತೆ ಪಟ್ಟು ಹಿಡಿದು ಒಪ್ಪಿಸಿದರು; ಸುಭಾಷ ಚಂದ್ರ ಬೋಸರ ಪ್ರಾಮಾಣಿಕ ರಾಜಕೀಯ ಬದ್ಧತೆಯ ಬಗ್ಗೆ ಕಾಳಜಿ ಇದ್ದ ಈಕೆ ಸುಭಾಷ, ಗಾಂಧಿ, ನೆಹರುರವರ ಮಧ್ಯೆ ಬ್ರಿಟೀಷ ಜೊತೆ ಒಪ್ಪಂದದ ವಿಚಾರದಲ್ಲಿ ಘರ್ಷಣೆಯಾದಾಗ ಸುಭಾಷರ ವೈಯಕ್ತಿಕ ಒಳಿತಿಗಾಗಿ ಪ್ರೇಮ, ಅಕ್ಕರೆಗಳಿಂದ ತುಡಿದರು.

ಆಚಾರ್ಯ ಕೃಪಲಾನಿ, ಗಾಂಧಿಯವರ ಜೊತೆ ಭಗತ್‌ಸಿಂಗ್‌ನ ಮರಣದಂಡನೆಯನ್ನು ತಪ್ಪಿಸಲು ಪ್ರಯತ್ನ ಪಟ್ಟರು. ಸ್ವಾತಂತ್ರ್ಯೋತ್ತರ ಭಾರತದಲ್ಲಿ ಇಂಡಿಪೆಂಡೆಂಟ್ ಕೋ ಆಪರೇಟಿವ್ ಟ್ರೇಡ್ ಯೂನಿಯನ್‌ಗಾಗಿ ಎಲ್ಲರ ವಿರೋಧ ಕಟ್ಟಿಕೊಂಡು ಕಂಕಣ ಬದ್ಧರಾಗಿ ನಿಂತು ಈ ಯೂನಿಯನ್‌ನ ಚಾಲಕಿಯಾದರು. ಹೀಗೆ ತಮ್ಮ ಮಧುರ ಭಾಂದವ್ಯಗಳ ಮಧ್ಯವೂ ತಮಗೆ ಸರಿ ಕಂಡದ್ದಕ್ಕೆ, ಸರಿ ಅನ್ನಿಸಿದ ನಿಲುವುಗಳಿಗೆ ಎಲ್ಲಾ ವಿರೋಧಗಳ ಮೀರಿ ಪಟ್ಟು ಹಿಡಿದು ನಿಂತ ಇವರ ಬದುಕು ಒಂದು ವಿಸ್ಮಯ.

ಸಮಾಜ ಸೇವಕಿಯಾಗಿ ಅನೇಕ ಹಂತಗಳಲ್ಲಿ ಈಕೆ ದುಡಿದಿದ್ದಾರೆ. ದಾದಿಯಾಗುವುದರಿಂದ ಹಿಡಿದು ರಾಜಕೀಯ ರಂಗದ ಕಾರ್ಯಕರ್ತೆಯಾಗಿ,

ಮಹಿಳಾ ಆಂದೋಳನಗಳ ಅಧ್ಯಕ್ಷೆಯಾಗಿ, ಅನೇಕ ನಾಟಕ ಪ್ರದರ್ಶನಗಳಿಗೆ ಸಕ್ರಿಯವಾಗಿ ದುಡಿದು, ಭಾಗವಹಿಸಿ ತಮ್ಮ ವಿವಿಧ ಮುಖಗಳನ್ನು ಬಿಂಬಿಸಿದ್ದಾರೆ. ತಮ್ಮ ಕಾಲದ ಎಲ್ಲಾ ಸಾಂಸ್ಕೃತಿಕ ನೆಲೆಗಳಿಗೂ ಸಂವೇದನಾತ್ಮಕವಾಗಿ ಸ್ಪಂದಿಸಿದ್ದಾರೆ.

ಪಾಶ್ಚಿಮಾತ್ಯ ಮಹಿಳಾ ಚಳುವಳಿಗಳ ಬಗ್ಗೆ ಅರಿವು ಮೂಡಿಸಿಕೊಂಡ ಇವರು ನಮ್ಮಂತಹ ದೇಶಗಳ ಮಹಿಳಾ ಚಳುವಳಿಗಳ ಉದ್ದೇಶ, ಯೋಜನೆ, ಚಟುವಟಿಕೆಗಳ ಬಗ್ಗೆ ಸಾಕಷ್ಟು ಜಾಗ್ರತರಾಗಿರಬೇಕೆಂದು ಮನಗಂಡಿದ್ದರು. ಪಾಶ್ಚಿಮಾತ್ಯ ಸಮಾಜ ಲಿಂಗಭೇಧ ನೀತಿಯಿಂದ ಸ್ಪಷ್ಟವಾಗಿ ಎರಡು ಹೋಳಾಗಿದೆ, ಹಾಗಾಗಿ ಅಲ್ಲಿ ಪುರುಷ ಹಾಗೂ ಮಹಿಳೆಯರ ಮಧ್ಯ ಕಠೋರವಾದ ಎದುರಾಳಿತನ ಹಾಗೂ ಸ್ಪರ್ಧೆ ಇದೆ ಎಂದು ಅನೇಕ ಜಗತ್ತುಗಳ ಸುತ್ತಿ ಬಂದ ಇವರ ಅನುಭವವಾಗಿತ್ತು. ಈ ಕಾರಣದಿಂದ ಪಾಶ್ಚಿಮಾತ್ಯ ಸಮಾಜ ಮಹಿಳಾ ಆಂದೋಲನಗಳು "ಹೆಣ್ಣುತನ" ವನ್ನೇ ದೂಷಿಸಿ, ಪ್ರಕೃತಿ ದತ್ತವಾಗಿರುವ ತಮ್ಮ ದೈಹಿಕ ಕ್ರಿಯೆಗಳನ್ನ ಕೆಳದೃಷ್ಟಿಯಿಂದ ನೋಡತ್ತಾರೆಂಬುದು ಇವರ ಅಭಿಮತವಾಗಿತ್ತು. ಈ ಎಲ್ಲಾ ಕಾರಣಗಳಿಂದ ಪಾಶ್ಚಿಮಾತ್ಯ ಮಹಿಳೆರು ಒಟ್ಟು ಸಮಾಜದಿಂದ ತಮ್ಮನ್ನು ಪ್ರತ್ಯೇಕ ಭಾಗವನ್ನಾಗಿ ನೋಡಿಕೊಂಡು ಅನಾಥರನ್ನಾಗಿಸಿಕೊಳ್ಳುತ್ತಾರೆ ಎಂಬುದು ಪಾಶ್ಚಿಮಾತ್ಯ ಮಹಿಳಾ ಆಂದೋಲನಗಳ ಬಗ್ಗೆ ಇವರ ನಿಲುವು.

ಈ ಎಲ್ಲಾ ಅರಿವುಗಳಿಂದಾಗಿ "ವಿಮೆನ್ ಕಾನ್‌ಫೆರೆನ್ಸ್" ಹಾಗೂ "ಸೋಷಿಯಲ್ ರಿಫಾರ್ಮ ಕಾನ್‌ಫೆರೆನ್ಸ್" ನಂತಹ ಸಂಸ್ಥೆಗಳು ಒಟ್ಟಾಗಿ ಹೋರಾಡಿದಲ್ಲಿ ಮಾತ್ರ ಭಾರತದ ದೇಶದಲ್ಲಿ ಮಹಿಳೆಯರ ಸಮಸ್ಯೆಗಳಿಗೂ ಒಂದು ಅರ್ಥವಂತಿಕೆ ಎಂಬುದು ಇವರ ಆಶಯವಾಗಿತ್ತು. ಹಾಗಾಗಿ ಈ ಎರೆಡಕ್ಕೂ ಅನ್ವಯಿಸುವಂತಹ ಚಟುವಟಿಕೆಗಳನ್ನು ಕಮಲಾದೇವಿಯವರು ಹಮ್ಮಿಕೊಳ್ಳುತ್ತಿದ್ದರು.

ಕೋಪನ್ ಹೇಗ್‌ನಲ್ಲಿ ಅಂತರ್‌ರಾಷ್ಟ್ರೀಯ ವಿಮೆನ್ಸ್ ಕಲೋನಿಯಲಿಸಂನ ಸಮಸ್ಯೆಗಳನ್ನು ಆಳುವ ರಾಷ್ಟ್ರದ ಆಂತರಿಕ ವಿಚಾರಗಳೆಂದೂ, ಅಂದರೆ ಆಳುವ ರಾಷ್ಟ್ರಕ್ಕೆ ತನ್ನ ವಸಾಹತುಗಳನ್ನು ಆಳುವುದಕ್ಕೆ ನ್ಯಾಯವಾದ ಹಕ್ಕಿದೆ ಎಂಬ ಧೋರಣೆಯನ್ನು ಸಮರ್ಥಿಸಿತು. ಈ ಧೋರಣೆಯನ್ನು ವಿರೋಧಿಸಿದ ಕಮಲಾದೇವಿಯವರು ಇಂಡಿಯಾದ ಈ ಸದಸ್ಯತ್ವವನ್ನು ರದ್ದು ಪಡಿಸಿದರು.

ಕರಕುಶಲತೆಯ ಬಗೆಗಿನ ಇವರ ಪ್ರೀತಿ ಕಾಳಜಿಗಳು ಇವರ ಸೌಂದರ್ಯ ಪ್ರಜ್ಞೆ, ರಾಜಕೀಯ ಪ್ರಜ್ಞೆಯನ್ನು ಎತ್ತಿ ಹಿಡಿಯುತ್ತವೆ. ಹಾಗಾಗಿ ಕರಕುಶಲತೆಯ ಬಗೆಗಿನ ಸಂಗ್ರಹಾಲಯವನ್ನು ಇಂದು ನಾವು ದೆಹಲಿಯಲ್ಲಿ ಕಾಣಬಹುದಾಗಿದೆ. ಹೀಗೆ ಮುಟ್ಟಿದಲ್ಲಿ, ಕಂಡಲ್ಲಿ, ಅನುಭವಿಸಿದಲ್ಲಿ, ನೊಂದಲ್ಲಿ ಸ್ಪಂದಿಸಿದ ಅಂತರಾಳದ ಸತ್ಯಗಳಿಗೆ ಹೃದಯಪೂರ್ವವಾಗಿ ತುಡಿದ ಸುಕ್ಷ್ಮಜೀವಿ ಕಮಲಾದೇವಿಯವರ ನೆನಪೂಂದು ನಮ್ಮ ಬದುಕಿಗೆ ಸ್ಫೂರ್ತಿ ದಾಯಕ ಚೇತನ.

# " ಮಾಂತ್ರಿಕ ಸ್ಪರ್ಶ ಮಣಿ, ಕಲಾತಜ್ಞೆ - ಕಮಲಾದೇವಿ ಚಟ್ಟೋಪಾಧ್ಯಾಯ "

ಈಗ್ಗೆ ಸುಮಾರು ಮೂರು ವರ್ಷಗಳ ಹಿಂದೆ ಬಾಲಕಾರ್ಮಿಕರ ಪರ ನೂತನ ಕಾಯ್ದೆಯೊಂದರ ವಿಷಯವಾಗಿ ದೆಹಲಿಯಲ್ಲಿ ನಡೆದ ವಿಚಾರ ಸಂಕಿರಣ ವೊಂದಕ್ಕೆ ಕಮಲಾದೇವಿ ಚಟ್ಟೋಪಾಧ್ಯಾಯ ಅವರು ಅತಿಥಿಯಾಗಿ ಆಗಮಿಸಿದ್ದರು. ಸುಮಾರು ೮೩ ವರ್ಷ ವಿರಬಹುದು, ಹಣ್ಣಾದ ಆಕೆ ಭಾಷಣ ಮಾಡಲು ಮೈಕಿನ ಹತ್ತಿರ ಹೊರಟಾಗ, ಅವರನ್ನು ಹಿಡಿದುಕೊ ಳ್ಳಲು, ನಾವು ಕೆಲವರು ಕೈ ನೀಡಿದೆವು. ಆಕೆ, "ಕೈ ಬಿಡಿ ನನಗ ಹೋಗಲು ಆಗುತ್ತದೆ, ನಾನೇ ಹೋಗು ತ್ತೇನೆ" ಎಂದರು. ಅವರನ್ನು ಭೇಟಿಯಾಗಲು, ಅವರ ದೆಹಲಿಯ ಕಛೇರಿಗೆ ಹೋಗಿದ್ದಾಗ, ಅವರನ್ನು ನೋಡಿದೊಡನೆ ಅನ್ನಿಸಿದ್ದು, "ಎಷ್ಟು ಚೆಂದದ ಮುದುಕಿ" ಎಂದು. ಯುವತಿಯಾಗಿದ್ದಾಗ, ಆಕೆ ಇನ್ನೆಷ್ಟು ಅಂದವಾಗಿದ್ದಳೋ ಎಂದುಕೊಳ್ಳುವಾಗಲೇ, ಗಂಭೀರ [illegible] ಕಣ್ಣುಗಳು, [illegible] ಹಣ್ಣಾದ ತಲೆ, ಮುಖದ ಮೇಲಿನ ಅನುಭವದ ಸಾವಿರಾರು ಗೆರೆಗಳನ್ನು ಕಂಡು ಮೂಕವಿಸ್ಮಿತರಾದೆವು. ಅಂದವಾದ ಕೈ ಮಗ್ಗದ ಸೀರೆ, ರಂಗು ರಂಗಿನ ಕೈ ಬಳೆಗಳು, ಬೆರಳುಗಳಿಗೆ ಉಂಗುರ ಗಳು, ಬಣ್ಣಬಣ್ಣದ ಕಿವಿಯೋಲೆಗಳು, ಬೆಳ್ಳಿಕೂದಲು ಪುಟ್ಟ ಗಂಟಿಗೊಂದು ಚೆಂದದ ಗುಲಾಬಿ ನೋಡಿ, ಕಣ್ಣು ತುಂಬಿ ಕೊಳ್ಳುತ್ತಿರುವಾಗಲೇ, "ಚಾ ಕುಡಿಯು ತ್ತೀರಾ" ಎಂದು ಕೇಳಿದರು. ತಬ್ಬಿಬ್ಬಾಗಿ ಹೂಂ ಅಂದೆವು. ಅವರೇ ಟೀ ಪಾಟು ಹಿಡಿದು, ನಡುಗುವ ಕೈಗಳಲ್ಲಿ ಲೋಟಕ್ಕೆ ಸುರಿಯುವಾಗ, "ಬಿಡಿ, ನಾವೇ ಹಾಕಿಕೊಳ್ಳುತ್ತೇವೆ" ಎಂದೆವು. ಸರಕ್ಕನೆ ಮೆಲುದನಿ ಯಲ್ಲಿ, ಆಕೆ "ಆಗುತ್ತೆ, ನಾನೇ ಹಾಕುತ್ತೇನೆ" ಎಂದಾಗ "ಅಬ್ಬಾ! ಎಂತಹ ಆತ್ಮವಿಶ್ವಾಸದ ಹೆಂಗಸು" ಎನ್ನಿಸಿತ್ತು,

ಕಮಲಾದೇವಿ ನಿವೃತ್ತ ಜಿಲ್ಲಾ ಕಲೆಕ್ಟರ್ ಅನಂ ತಯ್ಯ ಧಾರೇಶ್ವರ್ ಮತ್ತು ಗಿರಿಜಾಬಾಯಿಯವರ ಪುತ್ರಿ. ಚಿಕ್ಕವಯಸ್ಸಿನಲ್ಲಿಯೇ ತಾಯಿಯ ಮಾರ್ಗದರ್ಶ ನದಲ್ಲಿ, ಶಾಲೆ, ಆಟ, ನಾಟಕ, ಸಂಗೀತ ಮೊದಲಾದ ವುಗಳನ್ನು ಕಲಿತವರು. ಕಷ್ಟಪಟ್ಟು ವಿದ್ಯೆ ಕಲಿತು ಆರ್ಥಿಕ ಸ್ವಾವಲಂಬನೆ ಬೆಳೆಸಿಕೊಂಡಾಗ ಮಾತ್ರ ಹೆಣ್ಣಿಗೆ ಅಸ್ತಿತ್ವ ದೊರಕುವುದೆಂದು ಬಲವಾಗಿ ನಂಬಿ ದ್ದರು. ಈಕೆಯ ತಾಯಿ, ೨೦ನೇ ಶತಮಾನದ ಪ್ರಾರಂಭದಲ್ಲಿ, ಮಂಗಳೂರಿನಲ್ಲಿ ಮಹಿಳಾ ಸಭಾ ಸ್ಥಾಪಿಸಿ, ಅದನ್ನು ವಾಚನ, ಸಂಗೀತ, ನೃತ್ಯ, ಕ್ರೀಡಾ ಚಟುವಟಿಕೆಗಳ ಕೇಂದ್ರವನ್ನಾಗಿ ರೂಪಿಸಿದ ಅಪರೂಪದ ಮಹಿಳೆ ಗಿರಿಜಾಬಾಯಿ, ಇತ್ತೀಚೆಗೆ ಆ ಮಹಿಳಾ ಸಂಸ್ಥೆಗೆ ೭೫ ವರುಷ ಕಳೆದಿದೆ. ಬಹಳ ಚಿಕ್ಕ ವಯಸಿನಲ್ಲಿ ಕಮಲಳಿಗೆ ಈ ರೀತಿಯಾದ ವಾತಾ ವರಣ ದೊರಕಿದ್ದು ಗಮನೀಯ. ಗಿರಿಜಾಬಾಯಿ ಡಾ॥ಅನಿಬೆಸೆಂಟರ ಅಭಿಮಾನಿ ಹಾಗೂ ಅನುಯಾಯಿ. ಅನಿಬೆಸೆಂಟರು ಬಾಲಕಿಯರಿಗಾಗಿ ಶಾಲೆ ನಡೆಸಲು ಮಂಗಳೂರಿನಲ್ಲಿ ಕಟ್ಟಡವೊಂದನ್ನು ಬಿಟ್ಟು ಕೊಟ್ಟಿ ದ್ದರು. ಕಮಲಳಿಗೆ ಅನಿಬೆಸೆಂಟ್ ಹಾಗೂ ಮಿಸೆಸ್ ಕಸಿನ್ಸ್‌ರು ಮಾರ್ಗದರ್ಶಕರಾಗಿದ್ದರೆಂದು, ಕಮಲಾ ದೇವಿಯವರು ನೆನೆಸಿಕೊಳ್ಳುತ್ತಾರೆ. ಮಹಿಳೆಯರ ವಿದ್ಯೆ ಗಾಗಿ ಶ್ರಮಿಸಿರುವ ಅನೇಕರ ಪರಿಚಯವಾಗುತ್ತದೆ.

---

**ಸವಿತಾ, ಎ. ಸರಸ್ವತಿ ದು.**

---

ಪ್ರಮುಖವಾಗಿ ರಮಾಬಾಯಿ ರಾನಡೆ ಇವರು ಮಹಿ ಳೆಯರಿಗಾಗಿ ಸೇವಾಸದನವೆಂಬ ಸಂಸ್ಥೆಯೊಂದನ್ನು ಸ್ಥಾಪಿಸಿದವರು. ಮಹರ್ಷಿ ಕರ್ವೆಯವರಿಂದ ಪ್ರಭಾ ವಿತರಾಗಿ ಶ್ರೀವಿಠ್ಠಲ್‌ದಾಸ್ ಮತ್ತು ಪ್ರಮೀಲಾರ ವರು ಪುಣೆಯ ಮಹಿಳಾ ವಿದ್ಯಾ ಪೀಠವನ್ನು ಮಹಿಳಾ ವಿಶ್ವವಿದ್ಯಾನಿಲಯವನ್ನಾಗಿ ಮಾಡಿದರು. ಈ ವಿಶ್ವ ವಿದ್ಯಾನಿಲಯ ಈಗಲೂ ಎಸ್.ಎನ್.ಡಿ.ಟಿ. ಎಂದರೆ, ಶ್ರೀಮತಿ ನಾಥಿಬಾಯಿ ದಾಮೋದರ ಥ್ಯಾಕರಸೆ ಎಂಬ ಹೆಸರಿನಿಂದ ಬಹಳ ಹೆಸರುವಾಸಿಯಾಗಿದೆ. ಡಾ॥ ಹರ್ಡಿಕರ್‌ರವರ ಬೆಳಗಾವಿಯ ಸೇವಾದಳದಲ್ಲಿ ಕೆಲವು ಕಾಲ ಸ್ವಯಂಸೇವಕಿಯಾಗಿದ್ದರು. ಮುಂದೆ ಮದರಾಸಿನ ಆಲ್ ಇಂಡಿಯಾ ವಿಮೆನ್ಸ್ ಕಾನ್‌ಫರೆ ನ್ಸ್‌ನ ಜನರಲ್ ಸೆಕ್ರೆಟರಿ ಆಗಿ ನೇಮಕಗೊಂಡಿದ್ದು ಸರೋಜಿನಿ ನಾಯ್ಡುರವರ ಒತ್ತಾಯದಿಂದಾರೂ, ಮುಂದೆ ಕಮಲಾರವರು ಕಾನ್ಫರೆನ್ಸಿನ ಸೆಕ್ರೆಟರಿ ಆಗಿ ದ್ದಾಗ, ಭಾರತದಲ್ಲೆಲ್ಲಾ ಸುತ್ತಾಡಿ ಹೆಚ್ಚು ಹೆಚ್ಚು ಮಹಿಳಾ ಹಕ್ಕುಗಳ ವಿಚಾರವಾಗಿ ಪ್ರಚಾರ ನಡೆ ಸಿದರು.

ಗಾಂಧೀಜಿಯವರ ಉಪ್ಪಿನ ಸತ್ಯಾಗ್ರಹದಲ್ಲಿ

ಭಾಗವಹಿಸಲು ಅತೀ ಉತ್ಸಾಹದಿಂದ ಕಮಲಾದೇವಿ ತಮ್ಮ ಕಾರ್ಯಕರ್ತೆಯರೊಡನೆ ಸಕಲಸಿದ್ಧತೆ ಮಾಡಿಕೊಳ್ಳುತ್ತಿದ್ದರು. ಬಾಪೂಜಿಯವರ ನೇತೃತ್ವದ ಉಪ್ಪಿನ ಸತ್ಯಾಗ್ರಹದಲ್ಲಿ ಮಹಿಳೆಯರಿಗೆ ಕಾರ್ಯಕ್ರಮ ಸೂಚಿಸಿದ್ದರೇ ಹೊರತು, ಸಕ್ರಿಯ ಪಾತ್ರ ನೀಡಿರಲಿಲ್ಲ. ಕಮಲಾದೇವಿಯವರು ಬಹಳ ನೊಂದುಕೊಂಡರು, ಸಾಹಸಮಯವಾದ ಇಂತಹ ಸಾಮಾಜಿಕ ಚಟುವಟಿಕೆಯಲ್ಲಿ ಮಹಿಳೆಯರು ಪಾಲ್ಗೊಳ್ಳಬೇಕಾದ ಅವಶ್ಯಕತೆ ಇದೆ ಎಂದು ಮನಗಂಡರು.

ಕಮಲಾದೇವಿಯವರ 'ಭಾರತೀಯ ಮಹಿಳೆಯರ ಸ್ವಾತಂತ್ರ್ಯ ಹೋರಾಟ' — ಸ್ವಾತಂತ್ರ್ಯಕ್ಕಾಗಿ ಮಹಿಳೆಯರು ಹೋರಾಡಿದ್ದನ್ನು ಕುರಿತು ಬರೆದದ್ದು. ಇವರ 'ಇನ್ನರ್ ರಿಸೆಸ್ಸ್ ಔಟರ್ ಸ್ಪೇಸಸ್' ಅವರು ಕಂಡ ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ, ಸಂಬಂಧಗಳ, ಅವರ ಸಕ್ರಿಯ ಪಾತ್ರಗಳ ಹಾಗೂ ಅವರು ಒಡನಾಡಿದ ಗಣ್ಯ ವ್ಯಕ್ತಿಗಳ ಜೊತೆಗಿನ ಸುಂದರ ನೆನಪುಗಳ ಒಂದು ಅಮೂಲ್ಯ ದಾಖಲೆ.

ಅಲ್ಲದೇ ಈ ರೀತಿಯಾದ ಚಟುವಟಿಕೆ ಮಹಿಳೆಯರ ಮಿತಿಗಳನ್ನು ನಿವಾರಿಸಲು ಸಹಾಯವಾಗುತ್ತದೆ ಎಂದು ನಂಬಿ, ಮಹಿಳೆಯರು ಈ ಸತ್ಯಾಗ್ರಹದಲ್ಲಿ ಕ್ರಿಯಾತ್ಮಕವಾಗಿ ಭಾಗವಹಿಸಲೇಬೇಕೆಂದು ತೀರ್ಮಾನಿಸಿದರು. ಈ ಬಗ್ಗೆ ಚರ್ಚಿಸಬೇಕೆಂದು ತೀರ್ಮಾನಿಸಿ, ತಾವೇ ನೂರಾರು ಮೈಲಿಗಳಾಚೆ ತಂಗಿದ್ದ ಹಳ್ಳಿಯಲ್ಲಿ ಬಾಪುವನ್ನು ಭೇಟಿಯಾದರು. ಮಹಿಳೆಯರಿಗೆ ಸಕ್ರಿಯವಾಗಿರಲು ಅವಕಾಶಕೊಡಿ ಎಂದು ಕೇಳಿಕೊಂಡರು. ರಾಜಕೀಯ ರಂಗದಲ್ಲಿ ಮಹಿಳೆಯರು ತಮ್ಮನ್ನು ತೊಡಗಿಸಿಕೊಳ್ಳುವುದು ಸರಿಯಲ್ಲವೆಂದ ಗಾಂಧಿಯವರು, ಮಹಿಳೆಯರು ಸ್ವದೇಶ ಚಳುವಳಿಯಲ್ಲಿ, ಕುಡಿತದ ವಿರುದ್ಧ ಚಟುವಟಿಕೆಗಳಲ್ಲಿ ಭಾಗವಹಿಸಿದರೆ ಅಷ್ಟು ಸಾಕು ಎಂದರು. ಅದಕ್ಕೆ ಕಮಲಾದೇವಿಯವರು, ಸ್ತ್ರೀ ಪುರುಷ ಭೇದವೆಂಬುದು ಅಹಿಂಸಾತ್ಮಕ ಚಳುವಳಿಗೆ ಶೋಭಿಸುವುದಿಲ್ಲ ಎಂದು ಮತ್ತೆ ಮತ್ತೆ ಹೇಳಿ ಅವರ ಮನವೊಲಿಸಿ, ಅಂತೂ ಮಹಿಳೆಯರು ಉಪ್ಪಿನ ಸತ್ಯಾಗ್ರಹದಲ್ಲಿ ಸಕ್ರಿಯವಾಗಿ ಭಾಗವಹಿಸುವುದಕ್ಕೆ ಅನುಮತಿ ಪಡೆದರು. ೧೯೩೦ ರ ಎಪ್ರಿಲ್ ೬ ರ ಮುಂಜಾನೆ ಮುಂಬೈ ಕಡಲತೀರದಲ್ಲಿ ಸಾವಿರಾರು ಕಾರ್ಯಕರ್ತೆಯರೊಡನೆ ಉಪ್ಪನ್ನು ತಯಾರಿಸಿ ಬ್ರಿಟೀಷ್ ಸರ್ಕಾರದ ಉಪ್ಪಿನ ಕಾಯ್ದೆಯನ್ನು ಉಲ್ಲಂಘಿಸಿದರು. ಈ ಸಂದರ್ಭದಲ್ಲಿ ೨೧ ವರುಷದ ಕಮಲಾದೇವಿ ಮುಂಬೈನ ಬಜಾರ್ ಪೇಟೆ ಮುತಾದಕಡೆ ಉಪ್ಪಿನ ಪೊಟ್ಟಣಗಳನ್ನು ಮಾರುತ್ತಿದ್ದರು. ನ್ಯಾಯಾಲಯದ ಆವರಣದಲ್ಲಿ ಉಪ್ಪಿನ ಪೊಟ್ಟಣ ಮಾರಿ ನ್ಯಾಯಾಧೀಶರಿಗೂ ಉಪ್ಪಿನ ಪೊಟ್ಟಣಕೊಳ್ಳುವಂತೆ ಕೇಳಿದರು. ಇದರ ಪರಿಣಾಮ ಆಕೆಯ ದಸ್ತಗಿರಿ. ಹೆಚ್ಚು ಹೆಚ್ಚು ಜನರು ಉಪ್ಪಿನ ಕಾಯ್ದೆ ಉಲ್ಲಂಘಿಸಲು ಎಲ್ಲರಿಗಿಂತಲೂ ಕಮಲಳೇ ಹೆಚ್ಚಾಗಿ ಕಾರಣವಾಗಿರುವುದರಿಂದ ಬಹಳಷ್ಟು ಗಂಭೀರವಾದ ತಪ್ಪೆಂದು ತೀರ್ಮಾನಿಸಿ ಆಕೆಗೆ ಒಂದು ವರುಷದ ಕಾಲ ಜೈಲುವಾಸವಾಯಿತು.

ರಾಜಕೀಯ ಚಟುವಟಿಕೆಯಲ್ಲಿ ಮಹಿಳೆ ಭಾಗವಹಿಸುವಿಕೆಯ ಅವಶ್ಯಕತೆಯನ್ನು ಮನಗಂಡ ಈಕೆ ಮಹಿಳೆಯ ವೈಯಕ್ತಿಕ ಜೀವನದತ್ತ ಕೂಡ ಗಮನ ಹರಿಸಿದರು. ಕರಕುಶಲ ಹಾಗೂ ಕಸೂತಿಕಲೆಯ ಬಗ್ಗೆ, ಆಕೆಗೆ ಅಪಾರ ಪ್ರೀತಿ, ಗೌರವ. ಮಹಿಳಾ ಕಲೆಯಾದ ಕಸೂತಿಯಲ್ಲಿ ಕಲಾ ಕೌಶಲ್ಯತೆ ಹಾಗೂ ಸೂಕ್ಷ್ಮತೆ ಅತೀ ಮುಖ್ಯವೆಂದು ಇವರು ಮನಗಂಡರು. ಮನೆಯ ನಾಲ್ಕು ಗೋಡೆಗಳ ಮಧ್ಯದ ಜೀವನ ಕ್ರಮ ಮತ್ತು ಸಾಮಾಜಿಕ ಚಟುವಟಿಕೆಗಳಲ್ಲಿ ಹೆಚ್ಚು ಭಾಗವಹಿಸದ ಮಹಿಳೆಯರ ಹವ್ಯಾಸವಾಗಿರುವ ಕಸೂತಿ ಕಲೆಗೆ ವ್ಯಕ್ತಿಗತವಾದ ಹಾಗೂ ಸಾಮಾಜಿಕ ಮಹತ್ವವಿದೆ ಎಂದು ಇವರು ವಿಶ್ಲೇಷಿಸಿದ್ದಾರೆ. ಕಣ್ಣಿಗೆ ಬಿದ್ದ ಸಣ್ಣ ಕಲೆಗೂ, ಇವರು ಅರ್ಥಪೂರ್ಣ ರೂಪ

ಖಾಲಿ ಇದ್ದಲ್ಲಿ ಒಂದು ಅಸ್ತಿತ್ವವನ್ನು ತರುವ, ಅರ್ಥರಹಿತವಾದುದರಲ್ಲಿ ಅರ್ಥಪೂರ್ಣತೆಯನ್ನು ಮೂಡಿಸುವ, ಏನೂ ಅಲ್ಲದ್ದನ್ನು ಏನೋ ಒಂದನ್ನಾಗಿ ಪರಿವರ್ತಿಸುವ ಮಾಂತ್ರಿಕ ಶಕ್ತಿ ಕಸೂತಿ ಕಲೆಯಲ್ಲಿದೆ.

ನೀಡುತ್ತಿದ್ದರು. ಕಸೂತಿ ಕಲೆಯ ಬಗ್ಗೆ ಬರೆಯುತ್ತಾ, ಈಕೆ ಹೀಗೆ ಹೇಳುತ್ತಾರೆ "ಖಾಲಿ ಇದ್ದಲ್ಲಿ ಒಂದು ಅಸ್ತಿತ್ವವನ್ನು ತರುವ, ಅರ್ಥರಹಿತವಾದುದರಲ್ಲಿ ಅರ್ಥಪೂರ್ಣತೆಯನ್ನು ಮೂಡಿಸುವ, ಏನೂ ಅಲ್ಲದ್ದನ್ನು, ಏನೋ ಒಂದನ್ನಾಗಿ ಪರಿವರ್ತಿಸುವ ಮಾಂತ್ರಿಕ ಸ್ಪರ್ಶ ಕಸೂತಿ ಕಲೆಯಲ್ಲಿದೆ!"

ಕರಕುಶಲವಸ್ತುಗಳ ರಫ್ತನ್ನು ಹೆಚ್ಚಿಸಲು, ವಿದೇಶ ಬೇಡಿಕೆಗಳಿಗೆ ತಕ್ಕಂತೆ ನಮ್ಮ ಕರಕುಶಲ ಕೈಗಾರಿಕೆಯ ಬಗೆ ಬದಲಾಗಬೇಕೆಂಬ ಅಭಿಪ್ರಾಯ

ವನ್ನು ಕಮಲಾದೇವಿಯವರು ಒಪ್ಪಿರಲಿಲ್ಲ. ನಮ್ಮ ಕಲೆಗಾರಿಕೆಯ ವೈಶಿಷ್ಟ್ಯಗಳನ್ನು ಉಳಿಸಿಕೊಂಡು ಅಭಿವೃದ್ಧಿ ಸಾಧಿಸಿ ವಿದೇಶೀ ಬೇಡಿಕೆಯನ್ನು ಆಕರ್ಷಿಸಬೇಕೇ ಹೊರತು ಅವರು ಬಯಸಿದ್ದನ್ನು ಉತ್ಪಾದಿಸುವುದು ಸರಿಯಲ್ಲವೆನ್ನುತ್ತಿದ್ದರು. ಕರಕುಶಲ ಕಲೆಗಳ ರಕ್ಷಣೆ ಮತ್ತು ಅಭಿವೃದ್ಧಿ ಯೋಜನೆಯ ಅಂಗವಾಗಿ ದಕ್ಷಿಣ ಭಾರತದ ಕೇಂದ್ರವನ್ನು ಬೆಂಗಳೂರಿನಲ್ಲಿ ಪ್ರಾರಂಭಗೊಳಿಸಲಿಕ್ಕೆ ಕಮಲಾದೇವಿಯವರು ಕಾರಣರು. ಇತರ ಯಾವುದೇ ಕರಕುಶಲಕಲೆಯಂತೆ ಕಸೂತಿ ಕಲೆಯು ನೀರಸವಾದ, ಏಕತಾನವಾದ ನಿತ್ಯ ಜೀವನದಲ್ಲಿ ಆಕರ್ಷಕ ವಿನ್ಯಾಸ ಮತ್ತು ಬಣ್ಣಗಳ ಮೂಲಕ ಜೀವನದಲ್ಲಿ ಘನತೆ ಮತ್ತು ಲಾಲಿತ್ಯವನ್ನು ಬೆರೆಸುವ ಪ್ರಯತ್ನವೆಂದು ನಂಬಿದ್ದರು. ಜಾನಪದ ಕಲೆಯನ್ನು ಅಪಾರವಾಗಿ ಗೌರವಿಸಿದ ಈಕೆ, ಅದರ ಪರಿಸರದಿಂದ ಬೇರ್ಪಟ್ಟು, ಪ್ರದರ್ಶನಕ್ಕಿಟ್ಟು ಮೆರೆಸುವ ಸೋಗಲಾಡಿತನವನ್ನು ವಿರೋಧಿಸುತ್ತಿದ್ದರು. ಜಾನಪದ ಕಲೆ, ಸಂಸ್ಕೃತಿಗಳ ಅಭಿವೃದ್ಧಿಗೆ ಸಂಬಂಧಪಟ್ಟ ಕಾರ್ಯಕ್ರಮದಲ್ಲಿ ತೊಡಗಿದಾಗ, ಸ್ಥಳೀಯ ಕರಕುಶಲ ಕೈಗಾರಿಕೆಯ ವೈಶಿಷ್ಟ್ಯತೆಗಳನ್ನು ಅರಸುತ್ತಿದ್ದರು, ಕಲಾವಿದರನ್ನು ಗೌರವಿಸುತ್ತಿದ್ದರು. ವಿವಿಧ ವಿನ್ಯಾಸ ವೈಶಿಷ್ಟ್ಯಗಳ ನಕಲುಮಾಡಿಸಿ ತಮ್ಮ ದೆಹಲಿಯ ಸಂಗ್ರಹಾಲಯಕ್ಕೆ ತೆಗೆದುಕೊಳ್ಳುತ್ತಿದ್ದರು ಈಕೆ ಕಲೆಯನ್ನು ಸೃಜನಶೀಲತೆ, ಸಾಮಾಜಿಕ ಸಂದರ್ಭ, ಇತಿಹಾಸ, ಆರ್ಥಿಕ ವ್ಯವಸ್ಥೆಯ ನಾನಾ ನೆಲೆಗಳಿಂದ ಸಮೀಕ್ಷಿಸಿ ಬೆಲೆ ಕಟ್ಟಿದ ಕಲಾತಜ್ಞೆ. ಭಾರತದ ಉದ್ದಗಲಕ್ಕೂ ಸುತ್ತಾಡಿ ಪ್ರತಿಯೊಂದು ಮೂಲೆ ಮೂಲೆಯ ಜಾನಪದ ಕಲೆಯನ್ನು ನಿರಂತರವಾಗಿ ಹುಡುಕಿ ಅದರ ಉಳಿವಿಗಾಗಿ ಶಕ್ತಿ ಮೀರಿ ಪ್ರಯತ್ನಿಸಿದರು. ಈಕೆ ಪ್ರೋತ್ಸಾಹಿಸದ ಕಲೆ ಅಥವಾ ಕಲಾವಿದರೇ ಇಲ್ಲವೆನ್ನಬೇಕು. ಸಾಹಿತ್ಯ, ಸಂಗೀತ, ನಾಟಕ. ನೇಯ್ಗೆ, ಕೆತ್ತನೆ, ನೃತ್ಯಕಾರರು, ಗುಡಿಗಾರರು, ಚಿತ್ರಕಾರರು ಕಮಲಾದೇವಿಯವರ ಆದರಕ್ಕೆ ಪಾತ್ರರು.

ಈಕೆಯ "ಭಾರತದ ಕರ ಕುಶಲ ಕಲೆಗಳು," "ಭಾರತದ ಜಮುಖಾನ ಮತ್ತು ನೆಲ ಹಾಸುಗಳು," ಭಾರತೀಯ ಕರಕುಶಲ ಕಲೆಗಳು," "ಭಾರತೀಯ ಕಸೂತಿ ಕಲೆ" ಈ ಪುಸ್ತಕಗಳು ಇಡೀ ಭಾರತದ ಸಾಂಸ್ಕೃತಿಕ, ಕರಕುಶಲ ರಂಗದಲ್ಲಿ ಹೆಗ್ಗುರುತುಗಳು.

ಹುಟ್ಟಿದ್ದು ಸ್ಥಿತಿವಂತರ ಮನೆಯಲ್ಲಾದರೂ, ಬದುಕಿದ್ದು ಸರಳವಾಗಿ, ಅರ್ಥಪೂರ್ಣವಾಗಿ. ದುಡಿದದ್ದು ಸಾಮಾನ್ಯರಿಗಾಗಿ. ತನ್ನೆಲ್ಲ ಪ್ರತಿಭೆ, ಸೃಜನಶೀಲತೆ, ಅಧಿಕಾರವನ್ನೆಲ್ಲ ವಿನಿಯೋಗಿಸಿದ್ದು ದೇಶಸೇವೆಗಾಗಿ, ಕಲೆಗಾಗಿ.

ಈಕೆಗೆ ದೊರೆತ ಪ್ರಶಸ್ತಿಗಳು: ಫಿಲಿಫೈನ್ಸ್‌ನ ಮ್ಯಾಗ್‌ಸೇಸೆ ಪ್ರಶಸ್ತಿ, ಜೆಕೋಸ್ಲಾವಾಕಿಯ ಸರ್ಕಾರದ ಸ್ವರ್ಣ ಪದಕ ಗೌರವ, ಯುನೆಸ್ಕೋದ ಸನ್ಮಾನ ಪತ್ರ, ಇಂಡಿಯಾದ ಪದ್ಮ ವಿಭೂಷಣ ಪ್ರಶಸ್ತಿ. ಕೇಂದ್ರ ಸಂಗೀತ ನಾಟಕ ಅಕಾಡಮಿಯು ಇತ್ತ ಸದಸ್ಯತ್ವ ಗೌರವ.

ಕಸೂತಿ ಕಲೆಯ ಬಗ್ಗೆ ಬರೆಯುತ್ತಾ — ಮಾಂತ್ರಿಕ ಸ್ಪರ್ಶ ಕಸೂತಿ ಕಲೆಯಲ್ಲಿದೆ ಎಂದು ಅವರು ವರ್ಣಿಸಿದ ಮಾತು ಆಕೆಯ ವ್ಯಕ್ತಿತ್ವಕ್ಕೆ ಅಕ್ಷರಶಃ ಒಪ್ಪುತ್ತದೆ. ಅರ್ಥಪೂರ್ಣತೆಯನ್ನು ತರುವ, ಏನೂ ಅಲ್ಲದ್ದನ್ನು ಏನೋ ಒಂದನ್ನಾಗಿ ಮಾಡುವ ಮಾಂತ್ರಿಕ ಸ್ಪರ್ಶ ಆಕೆಗಿತ್ತು. ಆ ಮಾಂತ್ರಿಕ ಶಕ್ತಿ, ಸ್ಪರ್ಶ ನಮ್ಮೊಂದಿಗೆ ಭರವಸೆಯ ಬೆಳಕಾದರೆ, ಅದೇ ನಾವು ಆಕೆಗೆ ಸಲ್ಲಿಸುವ ಅರ್ಥಪೂರ್ಣ ಶ್ರದ್ಧಾಂಜಲಿ.

---

## ಮಹಿಳಾ ಕಾರ್ಮಿಕರ ಹೋರಾಟಕ್ಕೆ ಜಯ

ಹಾರ್ಡ್ ಗಾರ್ಮೆಂಟ್ಸ್‌ನ ಇನ್ನೂರು ಮಂದಿ ಮಹಿಳಾ ಕಾರ್ಮಿಕರು 89ರ ಜನವರಿ 12ರಿಂದ 16ರವರೆಗೆ ತಮ್ಮ ಬೇಡಿಕೆಗಳನ್ನು ಮಂಡಿಸಿ ನಡೆಸಿದ ಐತಿಹಾಸಿಕ ಹೋರಾಟದಲ್ಲಿ ಜಯಪ್ರದರಾಗಿದ್ದಾರೆ.

ಹಾರ್ಡ್ ಗಾರ್ಮೆಂಟ್ಸ್ – ಬೆಂಗಳೂರು - ಮದ್ರಾಸ್ ಹೆದ್ದಾರಿಯಲ್ಲಿ ಮೈಸೂರ್ ಮೆಟಲ್ ಲ್ಯಾಂಪ್ಸ್ ಕಾರ್ಖಾನೆಯ ಆವರಣದಲ್ಲಿ ಮಧುರಾ ಕೋಟ್ಸ್‌ನಾ ಸಹಭಾಗಿತ್ವದಲ್ಲಿ ಸಿದ್ಧಪಡಿಸಿದ ವಸ್ತುಗಳ ಒಂದು ಘಟಕ. ಈ ಘಟಕವು 1982ರಲ್ಲಿ ಬೆಂಗಳೂರ್ - ವೈಟ್‌ಫೀಲ್ಡ್ ರಸ್ತೆಯ ರಾಜಪಾಳ್ಯದಲ್ಲಿ ಪ್ರಾರಂಭವಾಯಿತು. ಈ ಘಟಕದಲ್ಲಿ ಪ್ರಾರಂಭದಿಂದ ಕೆಲಸ ಮಾಡುತ್ತಿದ್ದ ಗ್ರಾಮೀಣ ಪ್ರದೇಶದ ಕೆಳವರ್ಗದ ಮಹಿಳೆಯರು ಕೇವಲ 150ರೂ. ಸಂಬಳಕ್ಕೆ ತಮ್ಮನ್ನು ಜೀತದಾಳುಗಳನ್ನಾಗಿಸಿಕೊಂಡವರು. 1984ರ ನಂತರ ವೈಟ್‌ಫೀಲ್ಡ್ ಪ್ರದೇಶದಲ್ಲಿನ ಕಾರ್ಖಾನೆಗಳು ನಾನಾ ಕಾರಣಗಳಿಂದ ಮುಚ್ಚಲ್ಪಡುತ್ತಿರುವುದರಿಂದ ಒಟ್ಟಾಗಿ ಕಾರ್ಮಿಕರ ಬದುಕು ಶೋಚನೀಯವಾಗುತ್ತಾ ನಡೆದಿದೆ. ಇಂತಹ ಸಂದರ್ಭಗಳಲ್ಲಿ ಈ ಕುಟುಂಬಗಳ ಮಹಿಳೆ

ಯರು ಕಾರ್ಮಿಕರಾಗಿ ಆರ್ಥಿಕ ಜವಾಬ್ದಾರಿಯ ನೊಗ ಹೊರ ಬೇಕಾದಂತಹ ಸ್ಥಿತಿ ರೂಪಿತವಾಗಿದೆ. ಈ ರೀತಿ ಮುಚ್ಚಿರುವ ಕಾರ್ಖಾನೆಗಳಿಂದಾಗಿ ಕೆಲಸ ಕಳೆದುಕೊಂಡ ಕಾರ್ಮಿಕರ ಮಡದಿ, ಮಕ್ಕಳು, ಸತ್ತ ಕಾರ್ಮಿಕರ ಪತ್ನಿಯರು ಈ ಘಟಕದಲ್ಲಿ ವಿಶೇಷ ವಾಗಿ ದುಡಿಯುವುದು ಕಾಣುತ್ತದೆ. ಸಂಸಾರದ ಖರ್ಚು, ವೆಚ್ಚ ಮಕ್ಕಳ, ಹಾಗೂ ಇತರರ ಯೋಗಕ್ಷೇಮ, ವಿದ್ಯಾಭ್ಯಾಸ ಇವೆಲ್ಲವೂ ಈ ಮಹಿಳಾ ಕಾರ್ಮಿಕರ ಅಲ್ಪ ಸಂಬಳದಲ್ಲಿ ನಡೆಯ ಬೇಕಾದಂತಹ ಕಠಿಣ ಸ್ಥಿತಿ ಇವರದು.

ಉತ್ಪಾದನಾ ಖರ್ಚು - ವೆಚ್ಚ ಕಡಿಮೆ ಮಾಡುವ ಲಾಭಾಂಶವನ್ನು ಬೇರೆಡೆಗೆ ವರ್ಗಾಯಿಸುವ, ಕಾರ್ಮಿಕ ಶಕ್ತಿಯನ್ನು ಮುರಿಯುವ ಅಥವಾ ಕಾರ್ಖಾನೆಯ ಘಟಕಗಳನ್ನು ವಿಸ್ತರಿಸಿ ಅಗ್ಗ ದರದಲ್ಲಿ ಶ್ರಮಗಾರರನ್ನು ಬಳಸುವುಕ್ಕಾಗಿ ಬಹುತೇಕ ಕಾರ್ಖಾನೆಯ ಮಾಲಿಕರು ತಮ್ಮ ಕಾರ್ಖಾನೆಗಳನ್ನು ಬೇರೆಡೆಗೆ ವರ್ಗಾಯಿಸುತ್ತಾ ಅಥವಾ ಕಾರ್ಖಾನೆಯ ಉಪ ಘಟಕಗಳನ್ನು ವಿಸ್ತರಿಸಿ, ಉತ್ಪಾದನೆಯ ಹಂತವನ್ನು ಕಣ್ಣಿಗೆ ಕಾಣಿಸದ ರೀತಿ ಬಿಡಿ ಬಿಡಿಯಾಗಿಸಿ, ಒಟ್ಟು ಸೂತ್ರವನ್ನು ತಮ್ಮ ಕೈಯಲ್ಲಿ ಹಿಡಿಯಲು ಪ್ರಯತ್ನಿಸುತ್ತಾರೆ. ಇದೇ ರೀತಿ 1988ಮಾರ್ಚ್ 25ರಂದು ಹಾರ್ಡ್ - ಗಾರ್ಮೆಂಟ್ಸ್ ಕಾರ್ಖಾನೆಯ ಮಾಲಿಕರು ಈ ಘಟಕವನ್ನು ಇಬ್ಭಾಗವಾಗಿ ಒಡೆದು ಒಂದು ಭಾಗವನ್ನು ಬೊಮ್ಮಸಂದ್ರ ರಸ್ತೆಗೂ, ಮತ್ತೊಂದು ಭಾಗವನ್ನು ಹಳೇ ಮದ್ರಾಸ್ ರಸ್ತೆಗೂ ವರ್ಗಾಯಿಸಿದರು. ಈ ಗ್ರಾಮೀಣ ಪ್ರದೇಶದ ಮಹಿಳಾ ಕಾರ್ಮಿಕರು ನಡೆದು ಸೇರುವ ದೂರದಲ್ಲಿದ್ದ ಈ ಕಾರ್ಖಾನೆಯ ಘಟಕವು ಇಂದು 15 ಕಿಲೋ ಮೀಟರ್ ದೂರದಲ್ಲಿದ್ದು, ಎರಡು ಬಸ್ಸುಗಳನ್ನು ಹಿಡಿದುಕೊಂಡು ಪ್ರಯಾಣಿಸುವಂತಾಗಿದೆ. ಈ ಮಹಿಳಾ ಕಾರ್ಮಿಕರಿಗೆ ಸಿಗುವ 350 ರೂ. ಸಂಬಳದಲ್ಲಿ ದಿನವೊಂದಕ್ಕೆ 4·50ರೂ.ನಂತೆ ಬಸ್ ಛಾರ್ಜ್ ಕಳೆದು ತಿಂಗಳಿಗೆ ಕೇವಲ 160ರೂ. ಮಿಕ್ಕುತ್ತದೆ. ಇಂತಹ ತುಟ್ಟಿ ಕಾಲದಲ್ಲಿ ಈ ಅಲ್ಪ ಸಂಬಳದಲ್ಲಿ ಇವರು ನೆಮ್ಮದಿಯ ಜೀವನ ನಡೆಸುವ ಸ್ಥಿತಿಯಲ್ಲಿಲ್ಲ. ಕಾರ್ಖಾನೆಯ ಸ್ಥಳದಿಂದ ವಸತಿ ಸ್ಥಳಕ್ಕೆ ಸಾರಿಗೆ ಸೌಲಭ್ಯ ಒದಗಿಸುತ್ತೇವೆ ಎಂದು ಮಾಲೀಕರು ನೀಡಿದ ಭರವಸೆ, ಹಾಗೂ ಮಂತ್ರಿಗಳಿತ್ತ ಆಶ್ವಾಸನೆಗಳು ಹಾಗೆಯೇ ಉಳಿದಿವೆ.

ಎಲ್ಲ ಕಾರ್ಖಾನೆಯ ಬಂಡವಾಳಶಾಹಿಗಳಂತೆ ಈ ಮಾಲೀಕರೂ ಸಹ ಈ ಮಹಿಳಾ ಕಾರ್ಮಿಕರ ಸಂಘಟನಾ ಶಕ್ತಿಯನ್ನು ಸಹಿಸಲಿಲ್ಲ. ಸಂಘಟನೆಗೆ ರೂಪು - ರೇಷೆಗಳನ್ನು ತಯಾರಿಸಿದ 20 ಮಂದಿ ಮಹಿಳಾ ಕಾರ್ಮಿಕರಿಂದು ಬೀದಿಪಾಲಾಗಿದ್ದಾರೆ. ಈ 20 ಮಂದಿ ನ್ಯಾಯಾಲಯದ ಮೊರೆ ಹೊಕ್ಕು ಇಂದಿಗೂ ಕೋರ್ಟ್, ಕಛೇರಿ ಅಲೆಯುತ್ತಿದ್ದಾರೆ. ಈ ಕಾರ್ಮಿಕರು 28 - 3 - 1988ರಂದು ಸಿ.ಐ.ಟಿ.ಯು. ಆಶ್ರಯದಲ್ಲಿ ಸಂಘಟಿತರಾದದ್ದು ಎಂದು ಸಂಘಟನೆಯ ನಾಯಕಿ ಲೂಸಿ ಹೇಳುತ್ತಾರೆ.

ಮಾಲೀಕರು ಭರವಸೆಗಳನ್ನು ಈಡೇರಿಸದಿರುವುದರಿಂದ ಹಾರ್ಡ್ - ಗಾರ್ಮೆಂಟ್ಸ್‌ನ 200 ಮಹಿಳಾ ಕಾರ್ಮಿಕರು ಜನವರಿ 12ರಿಂದ16ರವರೆಗೆ ಕಾರ್ಖಾನೆಯ ಒಳ ಆವರಣದಲ್ಲಿ ಕೆಲಸ ಸ್ಥಗಿತ ಮುಷ್ಕರ ನಡೆಸಿ, ಹಗಲು - ಇರುಳನ್ನು ಕಳೆದರು. ಬೇಡಿಕೆ ಈಡೇರಿಸುವಲ್ಲಿ ಕಾರ್ಖಾನೆಯ ಮಾಲೀಕರು ನಿರ್ಲಕ್ಷ್ಯ ತೋರಿದಲ್ಲಿ, ನಿಧಾನ ಧೋರಣೆ ಮುಂದುವರಿಸಿದಲ್ಲಿ ಅಥವಾ ಸಂಘಟನೆಯನ್ನು ಮುರಿಯಲು ಯತ್ನಿಸಿದಲ್ಲಿ, ಶ್ರಮಜೀವಿಗಳ ಉತ್ಪಾದನಾ ಶಕ್ತಿಯಿಂದ ಅಧಿಕ ಲಾಭ ಗಳಿಸುತ್ತಿರುವ ಕಾರ್ಖಾನೆಯನ್ನು ತಾವೇ ನಡೆಸಲು ಸಿದ್ಧರೆಂದು ಕಾರ್ಮಿಕರ ನಿಲುವನ್ನು ಲೂಸಿಯವರು ಸ್ಪಷ್ಟಪಡಿಸಿದರು.

ಹೀಗೆ ಐದು ದಿನಗಳ ಕಾಲ ಎಡಬಿಡದೇ ಪಟ್ಟು ಹಿಡಿದು ಮಹಿಳಾ ಕಾರ್ಮಿಕರು ಮುಷ್ಕರ ನಡೆಸಿದ ಫಲವಾಗಿ ಕೆಲವೊಂದು ಅನುಕೂಲಗಳು ಅವರಿಗೆ ದೊರಕಿವೆ. 500ರೂ.ಗಳ ಮುಂಗಡ ಹಣ ಪಾವತಿ ಮಾಡುವುದರೊಂದಿಗೆ ಸಿಕ್‌ಲೀವ್(5), ಕ್ಯಾಷುಯಲ್‌ಲೀವ್( 5 ). ಪಿ.ಎಲ್.( 15 ) ರಜಾ ಸೌಲಭ್ಯಗಳನ್ನು ಒದಗಿಸಲಾಗಿದೆ. ಹೀಗೆ ಮಹಿಳಾ ಕಾರ್ಮಿಕರು ಇಟ್ಟ ದಿಟ್ಟ ಹೆಜ್ಜೆಯಲ್ಲಿ ಕ್ರಮೇಣವಾಗಿ ಕಾರ್ಮಿಕ ಸೌಲಭ್ಯಗಳನ್ನು ಪೂರ್ತಿಯಾಗಿ ಪಡೆಯುವ ಭರವಸೆ ಹೊಂದಿದ್ದಾರೆ.

**ಅಶ್ವತ್ ನಾರಾಯಣ ರೆಡ್ಡಿ**

---

## ಸಾರ್ವತ್ರಿಕದೆಡೆಗೆ : ವಿಮರ್ಶೆಯ "ಆಕೃತಿ" ಯ ಕುರಿತು ಒಂದು ಟಿಪ್ಪಣಿ

ಇತ್ತೀಚೆಗೆ ಮಹಿಳಾ ಸಾಹಿತ್ಯದ ಬಗ್ಗೆ ಬರುವ ವಿಮರ್ಶೆಗಳು ಹೆಚ್ಚು - ಕಡಿಮೆ ಅದರ ವಸ್ತು, ಸಿದ್ಧಾಂತ, ವಸ್ತುವನ್ನು ನಿರ್ವಹಿಸಿರುವ ಬಗೆ ಸೃಜನಾತ್ಮಕವಾಗಿದೆಯೋ, ಘೋಷಣೆಯ ಮಟ್ಟದಲ್ಲಿ ಉಳಿದಿದೆಯೋ, ಅನುಭವ ಸೀಮಿತವಾಗಿದೆಯೋ ಅಥವಾ ವೈವಿಧ್ಯಮಯವಾಗಿದೆಯೋ ಇಂತಹ ಕ್ಲೀಷೆಗಳಲ್ಲಿ ಮುಳುಗಿಹೋಗಿವೆ. ಈ ರೀತಿಯ ವಿಮರ್ಶೆಗಳು ಮತ್ತೆ ಮತ್ತೆ ಪುನರಾವರ್ತಿತವಾಗುತ್ತಿದೆಯೆ ಹೊರತು ಸೃಜನಾತ್ಮಕ ಬರವಣಿಗೆ ಅಥವಾ ಸಾಹಿತ್ಯ ವಿಮರ್ಶೆಯಲ್ಲಿ ತೊಡಗಿಸಿಕೊಳ್ಳುವ ಇತ್ತೀಚಿನ ಮಹಿಳಾ ಬರಹಗಾರ್ತಿಯರಿಗೆ ಇವು ಯಾವ ಹೊಸ ಸಾಹಿತ್ಯ - ಸಂಪ್ರದಾಯವನ್ನೂ ಸಹ ಸೃಷ್ಟಿಸುವುದಿಲ್ಲ. ಸಾಹಿತ ವಿಮರ್ಶೆಯ ವಾತಾವರಣದಲ್ಲಿ ಉಚಿತವಾಗಿರುವ 'ಸಾರ್ವತ್ರಿಕದೆಡೆಗೆ'. ಈ ಎಲ್ಲಾ ಮಿತಿಗಳನ್ನು ಒಳಗೊಂಡಿದ್ದರೂ ಸಹ ಪ್ರಸ್ತುತ ಸಂದರ್ಭದಲ್ಲಿ ಒಂದು ಪ್ರಶಂಸಾರ್ಹವಾದ ವಿಮರ್ಶಾ ಕೃತಿ. ಮಹಿಳಾ ಕಾವ್ಯದ ವಿಮರ್ಶೆ ಗಂಭೀರವಾಗಿ ನಡೆಯುದೇ ಇರುವಂತಹ ಸಂದರ್ಭದಲ್ಲಿ ಕಾವ್ಯಾತ್ಮಕವಾಗಿ ಒಡಮೂಡಿರುವ ಸ್ತ್ರೀ ಪ್ರಜ್ಞೆಯ ಪದರುಗಳು, ಅದರೊಳಗಿನ ವಿಡಂಬನೆಗಳು, ಕಾವ್ಯದ ಶಿಸ್ತು, ಶಬ್ದ ಪ್ರಯೋಗಗಳು, ಧೋರಣೆಗಳು, ಧ್ವನಿ ಶಕ್ತಿಯನ್ನು ಬಳಸಿಕೊಂಡ ಬಗೆ, ಭಾಷೆ, ಶಿಲ್ಪ, ತಂತ್ರ,

ಲಯ, ಇವುಗಳ ಆಳವಾದ ಅಧ್ಯಯನ ಪ್ರತಿಯೊಂದು ಕವನ ಸಂಕಲನದ ವಿಮರ್ಶೆಯಲ್ಲಿಯೂ ಕಂಡು ಬರುತ್ತದೆ. ಜೊತೆಗೆ ತೌಲನಿಕ ಅಧ್ಯಯನದಿಂದಾಗಿ ಈ ವಿಮರ್ಶಾ ಸಂಕಲನ ಮಹಿಳಾ ಸಾಹಿತ್ಯಕ್ಕೊಂದು ಉತ್ತಮ ಕೊಡುಗೆಯಾಗಿದೆ.

ಆಳವಾದ ಅಧ್ಯಯನದಿಂದ ಮೇಲ್ಕಂಡ ಈ ಅಂಶಗಳನ್ನು ಈ ಕೃತಿ ಮಂಡಿಸುತ್ತದೆ ಎಂಬ ಮೆಚ್ಚುಗೆಯ ವಿಷಯದ ಜೊತೆಗೆ ವಿಮರ್ಶೆಯ ವಿಧಾನ, ಅದರ 'ಆಕೃತಿ'ಯಲ್ಲಿ ಪ್ರಭುದ್ಧತೆಯನ್ನು ಹೊಂದಿದೆ ಎಂಬಂತೆ ಕಾಣುವುದು. ಆದರೆ ಹೀಗೆ ಆಯ್ಕೆ ಮಾಡಿಕೊಂಡ ವಿಮರ್ಶೆಯ 'ಆಕೃತಿ'ಯನ್ನು ವ್ಯವಸ್ಥಿತವಾಗಿ ಮಂಡಿಸುವಲ್ಲಿಯಾಗಲೀ ಅಥವಾ 'ಆಕೃತಿ'ಯ ಅಂಚುಗಳನ್ನು ಆಚೆ-ಈಚೆ ಗಮನಿಸುವಲ್ಲಾಗಲೀ ಮೂಲಭೂತ ಸ್ತರಗಳನ್ನು ಈ ವಿಮರ್ಶಾ ಸಂಕಲನದಲ್ಲಿ ಗುರುತಿಸುವುದಕ್ಕೆ ವಿಮರ್ಶಕಿ ಸೋತಿರುವುದೇ ಈ ಸಂಕಲನದ ದೊಡ್ಡ ಮಿತಿ ಎಂದು ನನ್ನ ಅನಿಸಿಕೆ. ಹೀಗಾಗಿ ಸಂಕಲನದಲ್ಲಿ ಪುನರಾವರ್ತನೆಗಳು, ಸಾಮಾನ್ಯೀಕರಿಸಿದ ಹೇಳಿಕೆಗಳು, ತೆಳುವಾದ ಬಂಧ, ಕ್ಲೀಷೆಗಳನ್ನು ಮತ್ತೆ ಮತ್ತೆ ಕಾಣಬಹುದು.

ಸಾಹಿತ್ಯ ವಿಮರ್ಶೆ ತೊಡಗಿಸಿಕೊಳ್ಳುವುದು ಕೃತಿಯೊಂದರ ತಾತ್ವಿಕತೆ, ವಸ್ತುವಿನ ಜೊತೆ. ಆದರೆ ಅಂತಿಮವಾಗಿ ವಿಮರ್ಶೆ ಸಾಹಿತ್ಯ ಕೃತಿಯೊಂದರ 'ಆಕೃತಿ' ಯಲ್ಲಿ ಮುಖಾಮುಖಿಯಾಗುತ್ತದೆ. (ಅಮೃತ ಮತ್ತು ಗರುಡ, 1983, ಪು. 11, 12, 19, ಡಿ. ಆರ್. ನಾಗರಾಜ್) ಹೇಗೆ ಸಾಹಿತ್ಯ ಕೃತಿಯೊಂದರ 'ಆಕೃತಿ' ಲೇಖಕಿ ಯಾ ಲೇಖಕನ ಶಕ್ತಿ ಸಾಂದ್ರತೆಗೆ ಸಂಬಂಧಪಟ್ಟಿದ್ದೋ ಹಾಗಯೇ ವಿಮರ್ಶೆಯೊಂದರ 'ಆಕೃತಿ'ಯೂ ಸಹ ಆ ವಿಮರ್ಶೆಯ ಪರಿಭಾಷೆಯನ್ನು ಗ್ರಹಿಸುವಲ್ಲಿ ಬಹಳಷ್ಟು ಮುಖ್ಯವಾದ ಅಂಶವೆಂದು ನನ್ನ ಅನಿಸಿಕೆ.

70—80ರ ದಶಕದ ಕವನಗಳನ್ನು ಕಾವ್ಯ ಪರಿಣತಿ, ಅಭಿವ್ಯಕ್ತಿಯಲ್ಲಿನ ಪ್ರೌಢತೆ, ಭಾವ-ವಿಚಾರಗಳ ಸಮತೋಲ ಇವುಗಳ ತೌಲನಿಕ ಅಧ್ಯಯನದಿಂದ ಮೂರು ವಿಭಾಗಗಳಾಗಿ ವಿಂಗಡಿಸುವಲ್ಲಿ ಹುಟ್ಟಿಕೊಂಡ ಮೊದಲನೇ ಭಾಗದ 'ಆಕೃತಿ' ಎರಡನೆಯ ಭಾಗದಲ್ಲಿ ಒಟ್ಟು ತುಡಿತಗಳನ್ನು ಗುರುತಿಸುವ ಇನ್ನೊಂದು ಆಕೃತಿಯನ್ನು ನಿರೂಪಿಸಿದೆ. ಇವೆರಡು ಆಕೃತಿಗಳ ಮಧ್ಯ ಸಾಮರಸ್ಯವೇರ್ಪಡಲು ಒಂದಕ್ಕೊಂದು ಪೂರಕವಾಗುವುದಕ್ಕಿಂತ, ಒಂದು ಶೀರ್ಷಿಕೆಯ ಅಡಿಯಲ್ಲಿ ಹೇಳಿಕೆಗಳು ಬಿಡಿಬಿಡಿಯಾಗಿ ಸಾಮಾನ್ಯೀಕರಿಸಿದ ಹೇಳಿಕೆಗಳನ್ನು, ತೆಳುವಾದ ಬಂಧವನ್ನು ಹುಟ್ಟು ಹಾಕಿದೆ. 'ನೋವು ನುಂಗುವ ಸೀತೆ, ನರಳುವ ಶಾಕುಂತಲೆಯರ ವಿರುದ್ಧ, ಅಕ್ಕ ಮಹಾದೇವಿಯ ಮಾದರಿ ಸ್ವಂತದ ಮಿತಿಯ ಅರಿವು', 'ಮಧ್ಯಮ ವರ್ಗದ ಮಿತಿಗಳ ಅರಿವು' 'ಸ್ವಂತಿಕೆಯ ಅನ್ವೇಷಣೆ' ಮತ್ತು ಸ್ವಂತದ ಅನುಭವಕ್ಕೆ ಸಾರ್ವತ್ರಿಕ ನೆಲೆ ಒದಗಿಸುವ ಯತ್ನ' ಈ ಭಾಗಗಳು ಚಾರಿತ್ರಿಕ ಅಥವಾ ರಾಜಕೀಯದ ಆಳವಾದ ಅಧ್ಯಯನದಿಂದ ಹುಟ್ಟಿಕೊಂಡ ನೆಲೆಗಳಲ್ಲ. ಈ ರೀತಿಯ ಪ್ರಶ್ನೆಗಳು ಈ ರೀತಿಯ ವಿಮರ್ಶೆಯಲ್ಲಿ ಏಕೆ ಅಗತ್ಯವಾಗುತ್ತವೆ ಎನ್ನುವುದಕ್ಕೆ ವಿಮರ್ಶೆಯ ಮಾತುಗಳನ್ನೇ ತೆಗೆದುಕೊಳ್ಳೋಣ:

ಪೀಠಿಕೆಯಲ್ಲಿ ಎರಡು ಮುಖ್ಯ ಸಂಗತಿಗಳನ್ನು ಇವರು ಬರೆಯುತ್ತಾರೆ. ಒಂದು : ಎಪ್ಪತ್ತರ ದಶಕದಲ್ಲಾದ ರಾಜಕೀಯ - ಸಾಮಾಜಿಕ ಹೊಸ ಪ್ರಜ್ಞೆಯ ಬಗ್ಗೆ ಹೇಳುತ್ತಾ, "..... ಸಮಾಜದ ಶೋಷಿತರು, ದಲಿತರು, ಸ್ತ್ರೀಯರು ಹೆಚ್ಚುಹೆಚ್ಚಾಗಿ ಸಂಘಟಿತರಾಗಿ, ಸಾಮಾಜಿಕ ಅಸಮಾನತೆಯ ವಿರುದ್ಧ, ಲಿಂಗಭೇದ ನೀತಿಯ ವಿರುದ್ಧ ಹೋರಾಟಕ್ಕಿಳಿಯುತ್ತಿದ್ದಾರೆ..." (ಪು. 1) ಇಂತಹ ಹಿನ್ನೆಲೆಯಲ್ಲಿ ಮಹಿಳಾ ಕಾವ್ಯವನ್ನು ಅಭ್ಯಾಸ ಮಾಡಬೇಕು ಎನ್ನುತ್ತಾರೆ ವಿಮರ್ಶಕಿ. ಇಂತಹ ಸಾಂಸ್ಕೃತಿಕ ವಾತಾವರಣದ ಸಂಪೂರ್ಣ ಚಿತ್ರಣ ನಮಗೆ ಅಗತ್ಯವಾಗುತ್ತದೆ. ಯಾವ ಸೈದ್ಧಾಂತಿಕ ನೆಲೆಯಲ್ಲಿ ಈ ಸಾಂಸ್ಕೃತಿಕ, ರಾಜಕೀಯ ಸಿದ್ಧತೆಗಳ ಪಕ್ವತೆಯ ಚಿತ್ರಣ ವಿಮರ್ಶಕಿ ನೀಡುತ್ತಾರೆಂಬುದು ಅವರ ವಿಮರ್ಶಾ ಆಕೃತಿಯನ್ನು ರೂಪುಗೊಳಿಸುವ ಅಂಶವಾಗುತ್ತದೆ. ಆದರೆ ಪ್ರಸ್ತುತ ವಿಮರ್ಶಾ ಸಂಕಲನದಲ್ಲಿ ಈ ರೀತಿಯ ಆಳವಾದ ಅಧ್ಯಯನದ ಚಿತ್ರಣ ನಮಗೆ ದೊರಕುವುದಿಲ್ಲ.

ಎರಡು : ಪೀಠಿಕೆಯಲ್ಲಿ ಮುಂದುವರೆಯುತ್ತಾ ವಿಮರ್ಶಕಿ ಹೇಳುತ್ತಾರೆ, "ಮಹಿಳಾ ಕಾವ್ಯ - ಮಹಿಳಾ ಸಾಹಿತ್ಯವೆಂಬ ಪ್ರತ್ಯೇಕ ಪರಿಗಣನೆ ಸಾಹಿತ್ಯ ವಿಮರ್ಶೆಯ ದೃಷ್ಟಿಯಿಂದ ಅಪ್ರಸ್ತುತವಾದದ್ದು ನಿಜ. ಆದರೆ ಒಂದು ಸಮುದಾಯದ ಒಟ್ಟು ಸಾಹಿತ್ಯ ಸ್ವರೂಪವನ್ನು ಅಭ್ಯಸಿಸಲು ಅನುಕೂಲವೆಂದು ಈ ಪದವನ್ನು ಪ್ರಸ್ತುತ ಲೇಖನದಲ್ಲಿ ಬಳಸಿದೆ" (ಪು 2). ಹೀಗೆ ಒಂದು ವಿಮರ್ಶೆ ಸಮುದಾಯದ ಒಟ್ಟು ಸಾಹಿತ್ಯದ ಸ್ವರೂಪ ಅಭ್ಯಸಿಸಲು ಅಗತ್ಯ ಎಂಬ ನಿಲುವು ತೆಗೆದುಕೊಳ್ಳುವಾಗ, ಈ ರೀತಿಯ ವಿಮರ್ಶೆ ಕೆಲವು ಪ್ರಶ್ನೆಗಳನ್ನು ಅನಿವಾರ್ಯವಾಗಿ ಲೆಕ್ಕ ಹಾಕಿಕೊಳ್ಳಬೇಕಾಗುತ್ತದೆ. ಈ ಅಂಶಗಳನ್ನು ಗಮನಿಸಿದಾಗ ಪ್ರಸ್ತುತ ವಿಮರ್ಶಾ ಸಂಕಲನ - "ಸಾರ್ವತ್ರಿಕದೆಡೆಗೆ" - ಈ ಕೆಳಕಂಡ ಪ್ರಶ್ನೆಗಳನ್ನು ಗಮನಿಸಬೇಕಾಗಿತ್ತು ಎಂಬುದು ನನ್ನ ಅಭಿಪ್ರಾಯ.

(1) 70-80ರ ದಶಕದ ಮಹಿಳೆಯರ ಸಂವೇದನೆಗೆ ಸಿದ್ಧತೆ ನಡೆಸಿದ್ದ ಸಾಂಸ್ಕೃತಿಕ ವಾತಾವರಣವೇನು ?

(2) ಸಾಂಸ್ಕೃತಿಕ ವಾತಾವರಣದ ಚಲನೆಗೆ ಪೂರಕವಾಗಿದ್ದ ರಾಜಕೀಯ ಸಿದ್ಧಾಂತಗಳಾವುವು ?

(3) ಈ ಎರಡೂ ಮಹಿಳೆಯರ ಪಾಲಿಗೆ ಯಾವ ಸಾಹಿತ್ಯಕ ವಾತಾವರಣ ಹುಟ್ಟು ಹಾಕಿದವು ?

(4) ಒಟ್ಟು ಮಹಿಳಾ ಕಾವ್ಯದ ಸ್ವರೂಪದ ಮಿತಿಗೆ ಹೊರಗಿನ ಪ್ರಭಾವವೆಷ್ಟು ? ಅಂತರಿಕ ಕಾರಣ ಎಷ್ಟು ?

(5) ಮಹಿಳಾ ಹಕ್ಕನ್ನು ಕುರಿತು ನಡೆಯುತ್ತಿರುವ ಭಾರತದ ಮಹಿಳಾ ಆಂದೋಲನದ ಪ್ರಭಾವ ಇಲ್ಲಿ ಎಷ್ಟರ ಮಟ್ಟಿಗೆ ಕಂಡು ಬರುತ್ತದೆ ?

(6) ಸೀತೆ, ಶಾಕುಂತಲೆ, ಅಕ್ಕ ಮಹಾದೇವಿಯರ ಪ್ರತಿಮೆಗಳನ್ನು ಸಹ ಈ ಹಿನ್ನೆಲೆಯಲ್ಲಿ ಅರ್ಥೈಸುವುದು ತಾತ್ವಿಕತೆಯ ದೃಷ್ಟಿಯಿಂದ ತೀರಾ ಆಗತ್ಯವೆನಿಸುತ್ತದೆ.

ಈ ಅಂಶಗಳನ್ನು ಗಮನಿಸಿದ್ದರೆ ಈ ಸಂಕಲನದ 'ಆಕೃತಿ' - ಕಾವ್ಯಕೃತಿ ಚಾರಿತ್ರಿಕತೆ, ಸಿದ್ಧಾಂತಗಳ (ಡಿ. ಆರ್. ನಾಗರಾಜ್‌ರವರು ಶಕ್ತಿ ಶಾರದೆಯ ಮೇಳದಲ್ಲಿ 1987 - ಬಳಸಿಕೊಡ ವಿಧಾನ.) ಒಟ್ಟು ಅಧ್ಯಯನದಿಂದ ಮೂಡಿ ಬಂದ ದಟ್ಟ ಸಾಂದ್ರತೆಯುಳ್ಳ "ಆಕೃತಿ"ಯಾಗಬಹುದಿತ್ತು.

ಕವನಕ್ಕೆ ನಿಷ್ಠೆಯಿಂದ, ಕಾವ್ಯ ಸ್ಪಂದನೆಯ ಪ್ರಭುದ್ಧತೆ, ಶೈಲಿ, ತಾತ್ವಿಕತೆಯನ್ನು ಆಳವಾಗಿ ಅಧ್ಯಯನ ನಡೆಸಿದ ಈ ವಿಮರ್ಶಕಿ - ಇದರ ಇನ್ನೊಂದು ಭಾಗವನ್ನು ಗಣನೆಗೆ ತೆಗೆದುಕೊಂಡಿದ್ದರೆ, "ಸಾರ್ವತ್ರಿಕದೆಡೆಗೆ" ವಿಮರ್ಶಾ ಸಂಕಲನ ದಟ್ಟವಾದ ಆಕೃತಿಯಿಂದ ಮೂಡಿ ಬರಬಹುದಾಗಿದ್ದು, ಹೆಚ್ಚು ಪ್ರಭುದ್ಧ ವಿಮರ್ಶಾ ಸಂಕಲನವಾಗಿ, ಮಹಿಳಾ ಬರಹಗಾರರಿಗೆ, ಹಾಗೂ ವಿಮರ್ಶಕರಿಗೆ ಒಂದು ಹೊಸ ಸಂಪ್ರದಾಯ ರೂಪಿಸಬಹುದಾಗಿತ್ತು.

ಚಂಪಾವತಿ ಎಚ್. ಎಸ್.

# ಆರೋಗ್ಯ

## ಗರ್ಭ ನಿಯಂತ್ರಣ

೨೧ನೇ ಶತಮಾನದತ್ತ ಜಗತ್ತು ತೀವ್ರಗತಿಯಲ್ಲಿ ಸಾಗುತ್ತಿರಲು ನಾವು ಮಹಿಳೆಯರು ಕೂಡ ನಾಲ್ಕು ಗೋಡೆಯ ಮಧ್ಯದ ಪ್ರಪಂಚದಿಂದ ಹೊರಬರುತ್ತಿದ್ದೇವಷ್ಟೆ. ಹೊರಜಗತ್ತಿಗೆ ಪಾದಾರ್ಪಣೆಮಾಡಿ ಪ್ರತಿಯೊಂದು ಉದ್ಯಮದಲ್ಲಿ ಆಸಕ್ತಿಯಿಂದ ಕಾರ್ಯಶೀಲರಾಗುತ್ತಿರುವುದು ಖಂಡಿತ ಆದರೂ ಮಹಿಳೆಯರು ಮದುವೆಯಾಗಿ ಮಗುವನ್ನು ಪಡೆದಾಗಲೇ ಬದುಕು ಸಾರ್ಥಕವೆಂಬ ಪುರಾತನ ನಂಬಿಕೆಯು ತೀರ ಬಲವಾಗಿದೆ. ಮಹಿಳೆಯರು ತಮ್ಮ ವ್ಯಕ್ತಿತ್ವದ ಬೆಳವಣಿಗೆಯನ್ನು ಗಂಭೀರವಾಗಿ ತೆಗೆದುಕೊಂಡು ಕಾರ್ಯೋನ್ಮುಖರಾಗಬೇಕೋ, ಅಥವ ಕೇವಲ ಮಹಿಳೆಯರಿಗಾಗಿ ರೂಪಿಸಿರುವ ಸಮಾಜದ ನೀತಿಯನ್ನು ಅನುಸರಿಸಬೇಕೋ ಎನ್ನುವುದರ ಬಗ್ಗೆ ಖಚಿತ ನಿರ್ಧಾರ ತೆಗೆದುಕೊಳ್ಳಲೇ ಬೇಕಾಗಿದೆ. ಸಮಾಜದ ರೀತಿಗಳು ತೀವ್ರಗತಿಯಲ್ಲಿ ಬದಲಾಗುತ್ತಿರಲು ಸಾಮಾಜಿಕ ನೀತಿಗಳು ಕಾಲಕ್ಕೆ ತಕ್ಕಂತೆ ಬದಲಾಗಬೇಕು. ಸಮಾಜದ ಪರಿಸ್ಥಿತಿ ಹೀಗಿರಲು ಮಹಿಳೆಯರು ಕೇವಲ ಹೆರುವ ಯಂತ್ರವಾಗಲಂತೂ ಖಂಡಿತಾ ಬಯಸುವುದಿಲ್ಲ. ನಮ್ಮ ಜೀವನದ ರೀತಿಯನ್ನು ರೂಪಿಸುವ ಹಾಗೂ ನಮ್ಮ ಸಂಪೂರ್ಣ ಹಿಡಿತ (ಹಕ್ಕು) ಪುರುಷರಿಗೆ ಅಂದರೆ ಪುರುಷ ಪ್ರಧಾನ ವ್ಯವಸ್ಥೆಗೆ ಸೇರಿದ್ದು. ಮಕ್ಕಳನ್ನು ಹೆರುವುದಲ್ಲದೇ ಬೆಳೆಸುವ ಮುಖ್ಯಾಲು ಜವಾಬ್ದಾರಿ ಹೆಣ್ಣಿನ ಮೇಲೆ ಸಮಾಜ ಹೇರಿರುವುದು ಸತ್ಯವಷ್ಟೆ. ಈ ಸಂದರ್ಭದಲ್ಲಿ ಲೈಂಗಿಕ ಕ್ರಿಯೆಯಲ್ಲಿ ಪುರುಷರ ಸಹಕಾರವಿಲ್ಲದಲ್ಲಿ ಮತ್ತೆ ಮತ್ತೆ ಗರ್ಭಧರಿಸುವ ಪರಿಸ್ಥಿತಿ ಉಂಟಾಗುವುದು ಅನಿವಾರ್ಯ. ಗರ್ಭಧಾರಣೆಯ ಭಯವಿಲ್ಲದೇ ಮುಕ್ತವಾಗಿ ಲೈಂಗಿಕ ಸುಖ ಅನುಭವಿಸುವುದೂ ಹೆಣ್ಣಿನ ಅವಶ್ಯಕತೆಯಲ್ಲವೆ? ಈ ಕೆಲವು ವಿಚಾರಗಳನ್ನು ಮೊದಲಿಗೆ ನಾವು ಗಂಭೀರವಾಗಿ ಯೋಚಿಸಿದಲ್ಲಿ ನಮ್ಮ ಬದುಕನ್ನು ಸ್ವಲ್ಪವಾದರೂ ಅರ್ಥಪೂರ್ಣಮಾಡಿಕೊಳ್ಳಲು ಸಾಧ್ಯ.

ನಾವು ಗರ್ಭನಿಯಂತ್ರಣದ ಬಗ್ಗೆ ವಿವರವಾಗಿ ತಿಳಿದುಕೊಳ್ಳುವ ಅಗತ್ಯವಿದೆ. ಸಧ್ಯದ ಪರಿಸ್ಥಿತಿಯಲ್ಲಿ ಪರಿಣಾಮಕಾರಿಯಾದ, ಸುರಕ್ಷಿತವಾದ, ಹಾನಿಕಾರಿಯಲ್ಲದ, ಅಗ್ಗವಾಗಿ ದೊರೆಯುವ ಗರ್ಭನಿರೋಧಕದ ಅವಶ್ಯಕತೆ ಇದೆ. ಇದು ಗರ್ಭಪಾತದ ಸಂಖ್ಯೆಯನ್ನು ಕಡಿಮೆಗೊಳಿಸುತ್ತದೆ. ಗರ್ಭನಿರೋಧಕಗಳು ಸುಧಾರಣೆಯಾಗುವ ತನಕ, ಸುರಕ್ಷಿತ ಗರ್ಭಪಾತಕ್ಕೆ ಸೌಲಭ್ಯಗಳರಬೇಕು.

ಪುರುಷರ ಸಹಕಾರವಿಲ್ಲದೇ, ಯಾವುದೇ ಗರ್ಭನಿರೋಧಕಗಳು ಶೇ.೧೦೦ರಷ್ಟು ಪರಿಣಾಮಕಾರಿಯಾಗಲಾರವು. ಗರ್ಭನಿರೋಧಕದ ಅವಶ್ಯಕತೆ ಹಾಗು ಉಪಯೋಗಿಸುವ ಸಂಪೂರ್ಣ ಜವಾಬ್ದಾರಿ ಹೆಣ್ಣಿನದೆಂದು ಪುರುಷ ಮಹಿಳೆಯರಿಬ್ಬರೂ ನಂಬಿದ್ದಾರೆ. ಈ ಮೊದಲೇ ಹೇಳಿದಂತೆ ಮಗುವನ್ನು ಹೆರುವ, ಬೆಳೆಸುವ ಹೆಚ್ಚಿನ ಜವಾಬ್ದಾರಿ ಹೆಣ್ಣಿನ ಮೇಲಿರುವುದರ ಪರಿಣಾಮವಾಗಿ, ಹೆಚ್ಚು ಗರ್ಭನಿರೋಧಕಗಳು ಮಹಿಳೆಯರಿಗಾಗಿಯೇ ತಯಾರಿಸಲ್ಪಟ್ಟಿವೆ. ಇದು ಹೆಣ್ಣಿನ ಮೇಲಿನ ಹೇರಿಕೆಯೇ ಸರಿ. ಈಗ ಹೆಚ್ಚು ಉಪಯೋಗಿಸಲ್ಪಡುತ್ತಿರುವ ಗರ್ಭನಿರೋಧಕ ಮಾತ್ರೆಯಾಗಲಿ, ವಂಕಿಯಾಗಲಿ ಹೆಣ್ಣಿನ ದೇಹಕ್ಕೆ ಹಾನಿಯುಂಟು ಮಾಡುವುದು ಖಂಡಿತ. ಸಾಮಾನ್ಯವಾಗಿ ಗರ್ಭನಿಯಂತ್ರಣದ ವಿಚಾರವನ್ನು ನಾವು ಪುರುಷರೊಡನೆ ಮಾತನಾಡಲಿಚ್ಛಿಸುವುದಿಲ್ಲ. ಗರ್ಭನಿಯಂತ್ರಣದ ಬಗ್ಗೆ ಯಾವುದೇ ತಿಳುವಳಿಕೆ ಇಲ್ಲದಿರುವುದು, ಮಕ್ಕಳನ್ನು ಹೆರುವುದು ಜೀವನದ ಅದಮ್ಯ ಕರ್ತವ್ಯವೆಂದು ನಂಬಿರುವುದು ಗರ್ಭನಿಯಂತ್ರಣ ಯಶಸ್ವಿಯಾಗದಿರುವುದಕ್ಕೆ ಕಾರಣವಾದರೂ, ಗರ್ಭನಿರೋಧಕಗಳ ಉಪಯೋಗದ ಜವಾಬ್ದಾರಿಯನ್ನು ಕೇವಲ ಹೆಣ್ಣಷ್ಟೆ ಅಲ್ಲದೇ ಪುರುಷರೂ ಸಮನಾಗಿ ಹಂಚಿಕೊಂಡರೆ, ಗರ್ಭನಿಯಂತ್ರಣ ಖಂಡಿತಕ್ಕೂ ಹೆಚ್ಚು ಪರಿಣಾಮಕಾರಿಯಾಗಬಲ್ಲದು.

ನಾವು ಉಪಯೋಗಿಸುವ ಗರ್ಭನಿರೋಧಕಗಳ ಬಗ್ಗೆ ಸಂಪೂರ್ಣ ಮಾಹಿತಿ ಪಡೆಯುವುದು ಒಳಿತು. ಯಾವುದೇ ಗರ್ಭನಿರೋಧಕದ ಪರಿಣಾಮ, ದುಷ್ಪರಿಣಾಮದ ಅರಿವಿರಬೇಕು. ಆದರೆ ಗರ್ಭನಿರೋಧಕಗಳ ಬಗ್ಗೆ ಸಂಶೋಧನೆ ಮಾಡಿ, ಅದರ ಒಳಿತು ಕೆಡಕುಗಳ ವಿವರ ನೀಡುವ ಸಂಸ್ಥೆಗಳು, ಮಹಿಳೆಯ ಆರೋಗ್ಯದ ಬಗ್ಗೆ ಗಮನಹರಿಸದೆ, ಕೇವಲ ಲಾಭ

ವನ್ನೇ ಗುರಿಯಾಗಿಟ್ಟುಕೊಂಡಿರುವುದು ದುರಂತವೇ ಸರಿ. ಡ್ರಗ್ಸ್ ಕಂಪನಿಗಳಾಗಲೀ, ವೈದ್ಯರಾಗಲಿ, ಆಸ್ಪತ್ರೆಗಳಾಗಲಿ, ಆರೋಗ್ಯ ಸಂಸ್ಥೆಗಳಾಗಲಿ, ಮಹಿಳಾ ಆರೋಗ್ಯದ ಬಗ್ಗೆ ವಿಶೇಷ ಗಮನನೀಡಿಲ್ಲ. ಸರ್ಕಾರವಾಗಲಿ, ಸಮಾಜವಾಗಲಿ ಮಹಿಳಾ ಆರೋಗ್ಯವನ್ನು ಕಡೆಗಣಿಸಿರುವುದಕ್ಕೆ ರಾಜಾಸ್ಥಾನದ ಘಟನೆಯೇ ಸಾಕ್ಷಿ. ಅಲ್ಲಿ ನಡೆದ ಕುಟುಂಬ ಯೋಜನೆಯ ಶಸ್ತ್ರ ಚಿಕಿತ್ಸೆಯಲ್ಲಿ ನೂರಾರು ಹೆಂಗಸರು ಜೀವ ತೆತ್ತರು.

ಯಾವುದೇ ಗರ್ಭನಿರೋಧಕವನ್ನು ಉಪಯೋಗಿಸಲು ಹೇಳುವ ಮುನ್ನ ಅದಕ್ಕೆ ಸಂಬಂಧಪಟ್ಟ ಒಳಿತು — ಕೆಡಕುಗಳನ್ನು ಕುರಿತು ಮರೆಯದೇ ತಿಳಿಸುವುದು ವೈದ್ಯರ ಕರ್ತವ್ಯವಷ್ಟೇ. ದುರದೃಷ್ಟವೆಂದರೆ ಇದು ಎಲ್ಲಿಯೂ ನಡೆಯುತ್ತಿಲ್ಲ. ಈ ಎಲ್ಲಾ ಕಾರಣಕ್ಕಾಗಿ ಗರ್ಭ ನಿರೋಧಕಗಳ ಬಗ್ಗೆ ಸರಿಯಾಗಿ ತಿಳಿದುಕೊಳ್ಳುವ ಜವಾಬ್ದಾರಿ ನಮ್ಮ ಮೇಲೆ ಇದೆ. ಹೊರಗೆ ದುಡಿಯುವುದಲ್ಲದೆ, ಮನೆಯಲ್ಲೂ ದುಡಿಯಬೇಕಾಗಿರುವುದರಿಂದ, ಪದೇ ಪದೇ ಗರ್ಭ ಧರಿಸುವುದರ ಬಗ್ಗೆ ಆಕೆ ಹೆಚ್ಚು ಗಂಭೀರವಾಗಿ ಯೋಚಿಸಲೇಬೇಕು.

ಸ್ತ್ರೀಯೋರ್ವಳು ತನ್ನ ಸ್ವ-ಅನುಭವದಿಂದ ಗೆಳತಿಯರೊಂದಿಗೆ ಅನುಭವವನ್ನು ಹಂಚಿಕೊಳ್ಳುವ ಮೂಲಕ, ಮುಕ್ತವಾಗಿ ಪುರುಷರೊಂದಿಗೆ ಮಾತನಾಡಿ ಅವರನ್ನು ಈ ವಿಷಯದಲ್ಲಿ ಜವಾಬ್ದಾರಿಯುತರನ್ನಾಗಿ ಮಾಡುವ ಮೂಲಕ, ತನ್ನ ದೇಹವನ್ನು, ಅದರ ಬದಲಾವಣೆಯನ್ನು ಅರಿತುಕೊಂಡು, ಯಾವ ವಿಧಾನ ತನಗೆ ಸೂಕ್ತವೆಂದು ತಾನೇ ನಿರ್ಧರಿಸಿಕೊಳ್ಳುವುದರ ಮೂಲಕ ಗರ್ಭ ನಿರೋಧಕಗಳ ಬಗ್ಗೆ ನಿರ್ದಿಷ್ಟವಾಗಿ ತಿಳಿದುಕೊಳ್ಳುವ ಸಾಧ್ಯತೆಯಿದೆ. ಈ ದೃಷ್ಟಿಯಲ್ಲಿ ಈಗ ಹೆಚ್ಚು ಉಪಯೋಗಿಸಲ್ಪಡುತ್ತಿರುವ ವಂಕಿ ಹಾಗೂ ಗರ್ಭ ನಿರೋಧಕ ಮಾತ್ರೆಗಳ ಬಗ್ಗೆ ತಿಳಿದುಕೊಳ್ಳುವ ಅವಶ್ಯಕತೆಯುಂಟು.

ಐ.ಯು.ಡಿ. ಎಂದರೆ ಗರ್ಭಕೋಶದಲ್ಲಿ ಅಳವಡಿಸುವ ಸಾಧನ. ನಮ್ಮ ದೇಶದಲ್ಲೀಗ ವಂಕಿ ಹೆಚ್ಚು ಉಪಯೋಗದಲ್ಲಿದೆ. ಶತಮಾನಗಳ ಹಿಂದೆ, ಮರಳುಗಾಡಿನಲ್ಲಿ ಒಂಟೆಯ ಮೇಲೆ ದೂರ ಪ್ರಯಾಣ ಮಾಡುತ್ತಿದ್ದವರು, ಒಂಟೆ ಬಸಿರಾಗುವುದನ್ನು ತಡೆಯಲು ಸಣ್ಣ ಕಲ್ಲುಗಳನ್ನು ಒಂಟೆಯ ಗರ್ಭಕೋಶದಲ್ಲಿ ಹಾಕುತ್ತಿದ್ದರಂತೆ. ಹೀಗೆ ಗರ್ಭಕೋಶದಲ್ಲಿ ಅಳವಡಿಸುವ ಒಂದು ಹೊರ ವಸ್ತುವಿಗೆ ಬಸಿರಾಗುವುದನ್ನು ತಡೆಯುವ ಸಾಮರ್ಥ್ಯ ಇದೆ ಎನ್ನಲಾಗಿದೆ. ಆದರೆ ಗರ್ಭವನ್ನು ಹೇಗೆ ನಿಯಂತ್ರಿಸುವುದೆಂದು ಇನ್ನು ತಿಳಿದುಬಂದಿಲ್ಲ. ಐ.ಯು.ಡಿ.ಯ ಪರಿಣಾಮದಿಂದಾಗಿ ಗರ್ಭಕೋಶದೊಳಗೆ ಉರಿಯೂತ ಉಂಟಾಗುವುದು. ಫಲವತ್ತಾದ ಅಂಡವು, ಸರಿಯಾಗಿ ಬೆಳೆಯದ ಯುಟರೈನ್ ಲೀವಿಂಗ್‌ನಲ್ಲಿ ನೆಲೆಗೊಳ್ಳುವುದಿಲ್ಲ, ಉರಿಯೂತದಲ್ಲಿನ ಬಿಳಿರಕ್ತಕಣಗಳು ವೀರ್ಯಾಣುವಿಗೆ ಅಥವಾ ಅಂಡಕ್ಕೆ ವಿಷವಾಗಬಲ್ಲದು, ಹಾಗು ಬೆಳೆಯುತ್ತಿರುವ ಅಂಡವು ಗರ್ಭಕೋಶದಲ್ಲಿ ನೆಲೆಗೊಳ್ಳಲು ಅಡ್ಡಿಯಾಗುವುದು. ಗರ್ಭಕೋಶವು ಹೊರವಸ್ತುವಿಗೆ ಪ್ರತಿಕ್ರಿಯಿಸುವುದರಿಂದಾಗಿ, ಉರಿಯೂತ, ಕೆರಳುವಿಕೆ ಉಂಟಾಗುತ್ತವೆ,

ವಂಕಿಯು ಹೆಚ್ಚು ಪರಿಣಾಮಕಾರಿಯಾದ ಗರ್ಭನಿರೋಧಕ. ಅದರಿಂದ ಹೊರಬರುವ ಕಾಪರ್ ಅಂಶ ಅಂಡವು ನೆಲೆಗೊಳ್ಳುವ ಪ್ರಕ್ರಿಯೆಯಲ್ಲಿ ಭಾಗವಹಿಸುವ ಕಿಣ್ವ - ಎಂಜೈಮ್‌ನ ಕ್ರಿಯೆಯನ್ನು ತಡೆಯುತ್ತದೆ ಹಾಗು ಗರ್ಭಕೋಶದೊಳಗೆ ಸಾಗುವ ವೀರ್ಯಾಣುವಿಗೆ ಅಡ್ಡಿ ಉಂಟುಮಾಡುತ್ತದೆ.

ಕರಾರುವಾಕ್ಕಾಗಿ ಐ.ಯು.ಡಿ. ಹೇಗೆ ಕೆಲಸ ಮಾಡುವುದೆಂದು ಯಾರಿಗೂ ತಿಳಿದಿಲ್ಲ. ಗರ್ಭನಿರೋಧಕ ಮಾತ್ರೆಗಳಿಂದುಂಟಾಗುವ ದುಷ್ಪರಿಣಾಮ, ಬೇರೆ ಗರ್ಭನಿರೋಧಕಗಳು ಹೆಚ್ಚು ಪರಿಣಾಮಕಾರಿಯಾಗದಿರುವುದರಿಂದ ಐ.ಯು.ಡಿ. ಹೆಚ್ಚು ಬಳಕೆಯಲ್ಲಿದೆ, ಆದರೆ ಐ.ಯು. ಡಿ.ಯಿಂದುಂಟಾಗುವ ಸೋಂಕು ಪೆಲ್ವಿಕ್ ಏರಿಯಾ ಅಲ್ಲದೇ ಇಡೀ ದೇಹಕ್ಕೆ ಹಬ್ಬಬಹುದು. ಒಮ್ಮೆಯೂ ಗರ್ಭ ಧರಿಸದ ಮಹಿಳೆಗೆ ಐ.ಯು.ಡಿ.ಯಿಂದ ವಿಪರೀತ ನೋವಾಗಬಹುದು. ಬಸಿರಿನಿಂದ ಹಿಗ್ಗದ ಗರ್ಭಕೋಶಕ್ಕೆ ವಂಕಿ ಅಳವಡಿಸುವುದರಿಂದ, ಬೆನ್ನುನೋವು ಹಾಗು ಸೆಳೆತ ಉಂಟಾಗುತ್ತದೆ. ಒಮ್ಮೆ ಅಳವಡಿಸಿದ ವಂಕಿ ಹೊರ ಬರುವ ಸಾಧ್ಯತೆಯಿದೆ. ಈ ವಂಕಿಯಲ್ಲಿನ ಕಾಪರ್ ಅಂಶವು ದೇಹದ ಮೇಲೆ ಯಾವ ಪರಿಣಾಮ ಉಂಟುಮಾಡುವುದೆಂದು ತಿಳಿದುಬಂದಿಲ್ಲ.

ವಂಕಿಯೊಂದಿಗೆ ನಿರೋಧ್‌ನ ಉಪಯೋಗ ಹೆಚ್ಚು ಪರಿಣಾಮಕಾರಿ. ವಂಕಿ ಧರಿಸಿದ ಮೊದಲ ತಿಂಗಳು ಬೇರೆ ಜನನ ನಿಯಂತ್ರಣವನ್ನು ಉಪಯೋಗಿಸುವುದು ಒಳ್ಳೆಯದು. ಕಾರಣ ವಂಕಿ ಕೆಲವೊಮ್ಮೆ ಹೊರ ಬರುವ ಸಾಧ್ಯತೆಯಿದೆ, ವಂಕಿ ಧರಿಸಿದಾಗಲು ಬಸಿರಾದರೆ ಗರ್ಭಪಾತವಾಗುವ ಸಂಭವವಿದೆ.

**ಪರಿಣಾಮಗಳು :** — ಐ.ಯು.ಡಿ. ಅಳವಡಿಸುವಾಗ ನೋವಾಗುವುದರಿಂದ ಹಾಗು ಸೋಂಕುಂಟಾಗುವುದರಿಂದ ಆಸ್ಪಿರಿನ್ ಹಾಗು ಆಂಟಿ ಬಯಟಿಕ್‌ಗಳನ್ನು ನೀಡುತ್ತಾರೆ. ಆದರೆ ಇವು ವಂಕಿಯ ಪರಿಣಾಮವನ್ನು ಕಡಿಮೆಮಾಡುತ್ತವೆ. ವಂಕಿಯಿಂದುಂಟಾಗುವ ಸೋಂಕು ಕೆಲವರಲ್ಲಿ ಬಂಜೆತನವನ್ನುಂಟು ಮಾಡವುದು. ಸರಿಯಾಗಿ ಅಳವಡಿಸದ ವಂಕಿಯಿಂದ ಗರ್ಭಕೋಶದಲ್ಲಿ ರಂಧ್ರವಾಗಬಹುದು (೧೦೦೦ಕ್ಕೊಬ್ಬ ಸ್ತ್ರೀಗೆ ಹೀಗಾಗಬಹುದು) ಈ ರಂಧ್ರದ ಮೂಲಕ ವಂಕಿಯು ಕೆಲವೊಮ್ಮೆ ಜಾರಿ ಉದರದೊಳಗೆ ಹೋಗಬಹುದು. ಇದರಿಂದಾಗಿ ಅಪಾಯಕಾರಿ ಉರಿಯೂತ ಉಂಟಾಗಬಹುದು. ಈ ಕಾರಣಕ್ಕಾಗಿಯೇ ವಂಕಿಯ ದಾರಗಳನ್ನು ಆಗಾಗ ಪರೀಕ್ಷಿಸಿಕೊಳ್ಳಬೇಕು. ಇಲ್ಲದಿದ್ದಲ್ಲಿ ವೈದ್ಯರನ್ನು ಕಾಣಬೇಕು.

ವಂಕಿಯಿಂದುಂಟಾಗುವ ಸೋಂಕು : — ವಂಕಿ ಧರಿಸಿದ ಎರಡು ವಾಗಳಲ್ಲಿ ಸೋಂಕುಂಟಾಗುವುದು ಹೆಚ್ಚು. ಸಾಮಾನ್ಯವಾಗಿ ವಂಕಿಯ ಅಳವಡಿಕೆ ಸರಿಯಿರದಿದ್ದಲ್ಲಿ ಗೊನೆರಿಯಾ ಇದ್ದಲ್ಲಿ, ಸೋಂಕುಂಟಾಗುತ್ತದೆ. ೧೨ ಮಹಿಳೆಯರಲ್ಲೊಬ್ಬರಿಗೆ (೨ ವಾರದೊಳಗೆ) ಸೋಂಕಾಗುವುದು. ವಂಕಿ ತೆಗೆಯುವಾಗ ರಕ್ತಸ್ರಾವ ಮತ್ತು ನೋವಿರುವುದರಿಂದ ಸೋಂಕುಂಟಾಗಬಹುದು. ಸೋಂಕಿನ ಮುಖ್ಯಲಕ್ಷಣ - ಜ್ವರ, ಉದರದಲ್ಲಿ ಅಥವಾ ಸೆರ್‌ವಿಕ್ಸ್‌ನಲ್ಲಿ ಹುಣ್ಣಾಗುವಿಕೆ. ವಂಕಿ ಧರಿಸಿದಾಗ ಸಂಭೋಗದ ಸಮಯದಲ್ಲಿ ನೋವಾದರೆ, ಅಥವಾ ಹೊಟ್ಟೆ ಅಶಕ್ತವಾದರೆ ವೈದ್ಯರಿಗೆ ತಿಳಿಸಿ. ವಂಕಿ ಧರಿಸಿದ ಮೇಲೆ ಗೊನೆರಿಯಾ ಬಂದಲ್ಲಿ, ವಂಕಿ ತೆಗೆಯುವವರೆಗೆ ಅದನ್ನು ವಾಸಿಮಾಡಲಾಗುವುದಿಲ್ಲ. ಆಗ ಸೋಂಕಿನ್ನೂ ಹೆಚ್ಚಬಹುದು. ಕೆಲವೊಮ್ಮೆ ಸಾಧಾರಣ ಉಪಕರಣಗಳಿಂದ ವಂಕಿ ತೆಗೆಯಲಾಗದಿದ್ದರೆ, ಗರ್ಭಕೋಶವನ್ನೆ ತೆಗೆಯಬೇಕಾಗಬಹುದು. ವಂಕಿ ಧರಿಸಿಯೂ ಗರ್ಭಧರಿಸಿದಲ್ಲಿ (ಶೇ. ೫೦) ಗರ್ಭಪಾತವಾಗುತ್ತದೆ. ಗರ್ಭಪಾತದೊಂದಿಗೆ ಸೋಂಕಾಗುವುದು. ವಂಕಿಯಿದ್ದಲ್ಲೂ ಬಸಿರಿ ಆದಲ್ಲಿ ತಕ್ಷಣವೇ ಗರ್ಭ ತೆಗೆಸಬೇಕು. ಇಲ್ಲದಿದ್ದರೆ, ಗರ್ಭಕೋಶದಲ್ಲಿ ರಂಧ್ರ, ಕರುಳಿನಲ್ಲಿ ರಕ್ತಸ್ರಾವ ಮತ್ತು ಬಸಿರಿನ ತೊಂದರೆಗಳು ಹೆಚ್ಚು ಅಪಾಯ ತರಬಹುದು. ತಂತಾನೇ ಆಗುವ ಗರ್ಭಪಾತ ಸಾವನ್ನೂ ತರಬಲ್ಲದು. ಬೆಳೆಯುತ್ತಿರುವ ಭ್ರೂಣಕ್ಕೆ ವಂಕಿಯಿಂದಾಗುವ ಪರಿಣಾಮವೇನೆಂದು ಇನ್ನು ತಿಳಿದಿಲ್ಲವಾದ ಕಾರಣ ಒಂದೆ ಒಂದು ವಾರ ಮುಟ್ಟು ತಡವಾದರೂ ವೈದ್ಯರನ್ನು ಕಾಣಬೇಕು.

ನ್ಯೂನತೆಗಳು : — ವಂಕಿಯ ಮುಖ್ಯ ನ್ಯೂನತೆ ಎಂದರೆ ಅದು ಹೊರಬರುವುದು. ಹಾಕಿಸಿಕೊಂಡ ಮೊದಲ ೩ ತಿಂಗಳಲ್ಲಿ ಸಾಧಾರಣವಾಗಿ ಮುಟ್ಟಿನ ಸಮಯದಲ್ಲಿ ಈ ಸಾಧ್ಯತೆಯಿದೆ ನಮಗೆ ತಿಳಿಯದೇ ಹೊರಬರಬಹುದು.

ಕೆಲವರ ಅನುಭವದಂತೆ, ವಂಕಿ ಅಳವಡಿಕೆಯು ಹೆಚ್ಚು ರಕ್ತಸ್ರಾವ, ಸೆಳೆತ ಮತ್ತು ಬೆನ್ನುನೋವನ್ನುಂಟುಮಾಡುತ್ತದೆ, ಸ್ವಲ್ಪ ದಿನಗಳ ನಂತರವೂ ಕಡಿಮೆಯಾಗದಿದ್ದಲ್ಲಿ ವೈದ್ಯರನ್ನು ನೋಡಿ, ವಂಕಿಯನ್ನು (ಶೇ. ೫ರಿಂದ ೨೦ರವರೆಗೆ) ತೆಗೆಸಿಕೊಳ್ಳುತ್ತಾರೆ. ವಂಕಿ ಅಳವಡಿಕೆಯಿಂದ, ಮುಟ್ಟಿನ ಸಮಯದಲ್ಲಿ ಹೆಚ್ಚು ರಕ್ತಸ್ರಾವವಾಗಬಹುದು, ಮುಟ್ಟಿನ ಕ್ರಮ ತಪ್ಪಬಹುದು. ಈ ಲಕ್ಷಣಗಳು ಧರಿಸಿದ ಮೊದಲ ೩ ರಿಂದ ೬ ತಿಂಗಳವರೆಗೂ ಕಾಣಿಸಿಕೊಂಡು ನಂತರ ಕಡಿಮೆಯಾಗುವುದು. ವಂಕಿಯಿಂದಾಗುವ ಸೋಂಕಿನಿಂದ ಗರ್ಭನಳಿಕೆ ಮುಚ್ಚಿಹೋಗುವುದರಿಂದ, ನಳಿಕೆಯಲ್ಲೆ ಗರ್ಭಧರಿಸುವ ಸಾಧ್ಯತೆಯಿದೆ. ವಂಕಿ ನ್ಯೂನತೆಯಿಂದ ಗರ್ಭಪಾತವಾದಲ್ಲಿ ಗರ್ಭಕೋಶದಲ್ಲಿನ ಭ್ರೂಣದ ಅಂಶವನ್ನು ಪರೀಕ್ಷಿಕೊಳ್ಳಬೇಕು.

ರಕ್ತಹೀನತೆಯಿರುವವರು, ಹೆಚ್ಚು ರಕ್ತಸ್ರಾವ ಮತ್ತು ಸೆಳೆತ ಇರುವವರು, ಲಿವರ್‌ನ ತೊಂದರೆಯಿರುವವರು, ಹೃದಯಕ್ಕೆ ಸಂಬಂಧಪಟ್ಟ ಖಾಯಿಲೆಯಿಂದ ಬಳಲುವವರು, ಗರ್ಭಕೋಶದ, ವೆಜೈನಾದ ಸೋಂಕಿರುವವರು, ರಕ್ತನಾಳಗಳಲ್ಲಿ ರಕ್ತ ಹೆಪ್ಪುಗಟ್ಟುವ ತೊಂದರೆಯಿರುವವರು ವಂಕಿ ಉಪಯೋಗಿಸಬಾರದು.

ವಂಕಿ ಹಾಕಿ ಅನುಭವವಿರುವ ವೈದ್ಯರ ಬಳಿ

ಯಲ್ಲೇ ವಂಕಿ ಹಾಕಿಸಿಕೊಳ್ಳಬೇಕು. ಹಾಕಿಸಿಕೊಳ್ಳುವ ಮೊದಲು ಎಲ್ಲ ವೈದ್ಯಕೀಯ ಪರೀಕ್ಷೆ, ಪೆಲ್ವಿಕ್ ಹಾಗೂ ಸ್ತನಗಳ ಪರೀಕ್ಷೆ, ಲೈಂಗಿಕ ರೋಗಗಳ ಪರೀಕ್ಷೆಗಳನ್ನು ಮಾಡಿಸಿಕೊಳ್ಳಬೇಕು. ವಂಕಿಯನ್ನು ಒಂದು ಸಣ್ಣ ಟ್ಯೂಬಿನ ಮೂಲಕ, ಸೆರ್‌ವಿಕ್ಸ್ ಒಳಗಿಂದ ಗರ್ಭಕೋಶಕ್ಕೆ ಅಳವಡಿಸಲಾಗುತ್ತದೆ. ಈ ಟ್ಯೂಬಿನಿಂದ ಗರ್ಭಕೋಶವು ಹಿಗ್ಗುವುದರಿಂದ ನೋವು ಹೆಚ್ಚಾಗುವುದು.

**ಮುನ್ನೆಚ್ಚರಿಕೆಗಳು :** — ಪ್ರತಿ ಆರು ತಿಂಗಳಿಗೊಮ್ಮೆ ಪರೀಕ್ಷಿಸಿಕೊಳ್ಳಬೇಕು. ವಂಕಿಯನ್ನು ಎರಡರಿಂದ ಐದು ವರ್ಷದೊಳಗೆ ಬದಲಾಯಿಸಿಕೊಳ್ಳಬೇಕು., ವಂಕಿ ಕರಗುವುದರಿಂದ, ತುಕ್ಕುಹಿಡಿಯುವುದರಿಂದ ಅಥವಾ .ಮುರಿದುಹೋಗುವುದರಿಂದ ಬದಲಾಯಿಸಬೇಕು. ವಂಕಿಯನ್ನು ಅದರ ದಾರಗಳನ್ನು ಮುಟ್ಟಿ ನೋಡಿಕೊಳ್ಳುವುದರ ಮೂಲಕ ಆಗಾಗ ಪರೀಕ್ಷಿಸಿಕೊಳ್ಳಬೇಕು. ಸಂಭೋಗದ ಮೊದಲು, ಪ್ರತಿ ಮುಟ್ಟಿನ ಸಮಯದಲ್ಲಿ ಪರೀಕ್ಷಿಸಿಕೊಳ್ಳಬೇಕು.

ಪರೀಕ್ಷಿಸಿಕೊಳ್ಳುವ ವಿಧಾನ : — [illegible] ಮೇಲೆ (ಬಹಿರ್ದೆಸೆಗೆ ಕುಳಿತುಕೊಳ್ಳುವ ರೀತಿಯಲ್ಲಿ ಕುಳಿತುಕೊಂಡು, ಕೈಯ ಉದ್ದ (ಶುಚಿಯಾದ) ಬೆರಳಿನಲ್ಲಿ ಸೆರ್‌ವಿಕ್ಸ್ ಅನ್ನು ಮುಟ್ಟಿಕೊಂಡರೆ ದಾರವಿರುವುದು ಗೊತ್ತಾಗುತ್ತದೆ. ಸೆರ್‌ವಿಕ್ಸ್‌ನಲ್ಲಿರುವ ಸಣ್ಣಕುಳಿಯೇ ಗರ್ಭಕೋಶದ ಪ್ರವೇಶದ್ವಾರ. ದಾರ ಸಿಗದಿದ್ದಲ್ಲಿ ಅಥವಾ ಹೆಚ್ಚು ಉದ್ದವಾಗಿದ್ದಲ್ಲಿ ವೈದ್ಯರನ್ನು ಕಾಣಬೇಕು. ದಾರದ ಉದ್ದ ಕಡಿಮೆಯಾಗಿದ್ದಲ್ಲಿ ಅದು ಒಳಹೋಗಿರುತ್ತದೆ, ಉದ್ದವಾಗಿದ್ದಲ್ಲಿ ಹೊರಬರಬಹುದು.

ಇದೆಲ್ಲದರ ಜೊತೆಗೆ ಮಗುವನ್ನು ಹೆರುವುದು, ಬೆಳೆಸುವುದರ ಜವಾಬ್ದಾರಿಗಳನ್ನು ಹೊರಬೇಕಾಗುವ ಹೆಣ್ಣು, ಈ ರೀತಿಯ ಗರ್ಭನಿರೋಧಕಗಳಿಗೆ ತನ್ನ ದೇಹವನ್ನೇ ಸಾಧನವಾಗಿಸಿಕೊಳ್ಳಬೇಕೇ ಎಂಬುದನ್ನು ಮಹಿಳೆಯರು, ಪುರುಷರು, ವೈದ್ಯರು, ವಿಜ್ಞಾನಿಗಳು ಆಳವಾಗಿ ಚಿಂತಿಸಬೇಕಾಗಿದೆ.

ಸರಸ್ವತಿ ಧು. ಸವಿತ ಎ.

---

## ಮಹಿಳೆಯರ ಕುರಿತು ಲೋಹಿಯಾ, ಅವರ ವಿಚಾರಗಳು

ಇಂಡಿಯಾದ ಜನ ಈ ಭೂಮಿಯ ಮೇಲಿನ ಅತ್ಯಂತ ದುಃಖಿತರು. ಏಕೆಂದರೆ ಅವರದು ಕಡುಬಡತನ ಮತ್ತು ತೀರ ದುರವಸ್ಥೆಯ ಬದುಕು. ಅಲ್ಲದೆ ಇತ್ತೀಚಿನ ದಿನಗಳಲ್ಲಿ ಅವರ ಚೈತನ್ಯ ವಿಚಿತ್ರ ರೀತಿಯಲ್ಲಿ ಅಧೋಗತಿಗೆ ಇಳಿದಿರುವುದು ಇನ್ನೊಂದು ಪ್ರಮುಖ ಕಾರಣ. ತಮ್ಮ ಬದುಕನ್ನು ದೊಡ್ಡ ಸಾಧನೆಗೆ ಸವಾಲಾಗಿಸುವುದಕ್ಕಿಂತ ಅವರು ಅತ್ಯಂತ ಕೆಳಮಟ್ಟದ ಬದುಕನ್ನೇ ಬಯಸುತ್ತಾರೆ.

ಜಾತಿ ಮತ್ತು ಹೆಂಗಸು ಈ ಎರಡು ಬಗೆಯ ಪ್ರತ್ಯೇಕೀಕರಣದಿಂದಾಗಿ ಈ ತೆರನಾದ ಚೈತನ್ಯದ ಅಧೋಗತಿಗೆ ಕಾರಣವೆಂಬುದು ನನಗೆ ತುಂಬಾ ಚೆನ್ನಾಗಿ ಮನದಟ್ಟಾಗಿದೆ. ಈ ಪ್ರತ್ಯೇಕೀಕರಣ ಎಷ್ಟು ಕ್ರೂರವಾದ್ದೆಂದರೆ ಇದಕ್ಕೆ ಎಲ್ಲ ಬಗೆಯ ಸಾಹಸ, ಸಂತೋಷಗಳನ್ನು ಹಾಳುಮಾಡುವಂತಹ ಶಕ್ತಿಯಿದೆ. ಜಾತಿ ಮತ್ತು ಲಿಂಗಗಳ ಪ್ರತ್ಯೇಕೀಕರಣಗಳು ಒಂದನ್ನೊಂದು ಬೆಸೆದುಕೊಂಡಿದ್ದು ಪರಸ್ಪರ ಬೆಂಬಲಿಸುವಂತಿದೆ.

ಮಹಿಳೆಯರ ಸಮಸ್ಯೆ ತೀರಾ ಕಷ್ಟಕರವೆನ್ನುವುದರಲ್ಲಿ ಅನುಮಾನವೇ ಇಲ್ಲ. ಭಯಂಕರ ಹೊಗೆಯಾಡುಗುಳುವ ಒಲೆಯ ಮತ್ತು ಅಡಿಗೆಮನೆಯಲ್ಲಿನ ಅವಳ ಗುಲಾಮಗಿರಿ ಕಳವಳ ಹುಟ್ಟಿಸುವಂಥದ್ದು. ಆಕೆಯ ಅಡಿಗೆಯ ವೇಳೆಯನ್ನು ಸಮಂಜಸ ರೀತಿಯಲ್ಲಿ ನಿರ್ಧಿಷ್ಟಗೊಳಿಸಬೇಕು ಮತ್ತು ಹೊಗೆಯನ್ನು ಹೊರತಳ್ಳುವಂತಹ ಚಿಮಣಿಗಳು ಬೇಕು. ವಾಸ್ತವದಲ್ಲಿ ಆಕೆ ನಿರುದ್ಯೋಗ ಮತ್ತು ಅರೆಹೊಟ್ಟೆಯ ವಿರುದ್ಧ ಖಂಡಿತವಾಗಿಯೂ ಪ್ರತಿಭಟಿಸಲೇಬೇಕು.

ಶ್ರೀಮತಿ ಶಕುಂತಲಾ ಶ್ರೀವಾಸ್ತವ ಅವರು ಭಾರತೀಯ ಮಹಿಳೆಯರ ಸ್ಥಿತಿಗತಿಯನ್ನು ಕುರಿತು ಚಾರ್ಮಿಂಗ್ ಆದ ಲೇಖನಗಳ ಸರಣಿಯನ್ನು ಬರೆಯುತ್ತಾ ಬಂದಿದ್ದಾರೆ. ಎಲ್ಲದಕ್ಕೂ ಗಂಡಸರನ್ನೇ ಆಕ್ರಮಣ ಮಾಡುವ ಸ್ತ್ರೀ ವಿಮೋಚನಾ ವಾದದ ಸಾಮಾನ್ಯೀಕೃತ ಭಾವೋದ್ರೇಕ ಮೀರಿ ಅವರು ಇಲ್ಲಿ ಹೆಣ್ಣು - ಗಂಡುಗಳಿಬ್ಬರ ಪಾತ್ರವೂ ಇರುವುದನ್ನು ಕಂಡುಕೊಂಡಿರುವುದು ನನಗ ಸಂತೋಷವೆನಿಸುತ್ತದೆ. ಆದರೆ ಈ ದಿಸೆಯಲ್ಲಿ ಆಕೆಯಿನ್ನೂ ಬೆಳೆಯಬೇಕಾಗಿದೆ.

ಅದೊಂದು ದಿನ ಮುಖ್ಯ ಸಮ್ಮೇಳನವೊಂದರಲ್ಲಿ ಆಕೆಯನ್ನು ವೇದಿಕೆಗೆ ಬರುವಂತೆ ಕೇಳಿಕೊಂಡಾಗ, ಆಕೆ ಗ್ಯಾಲರಿಯಲ್ಲಿ ಮುಗುಮ್ಮಾಗಿ ಕೂತುಬಿಟ್ಟದ್ದು ನನಗಿನ್ನೂ ನೆನಪಿದೆ. ಆದರೆ ಅದಕ್ಕೆ ಪರಿಹಾರ ನನ್ನಲ್ಲಿತ್ತು, ನಾನು ಆಕೆಯ ರಟ್ಟೆ ಹಿಡಿದು ಕರೆತರುವುದಾಗಿ ಹೆದರಿಸಬೇಕಾಯಿತು. ಆಕೆ ಆಕ್ಷಣ ವಿನಮ್ರರಾಗಿ ವೇದಿಕೆಗೆ ಬಂದಿದ್ದರು.

# ಸಂವೇದನೆ



"ನೀವು ನಮ್ಮನ್ನ ಗುಲಾಮರು ಅನ್ನಬಹುದು, ಆದ್ರೆ ನಾವು ನಿಮ್ಮನ್ನ ಒಡೆಯರು ಅನ್ನಬೇಕಾಗಿಲ್ಲ"

ಹೀಗಂತ ಎಲ್ಲೋ ಓದಿದ ನೆನಪು, ಎಲ್ಲಿ ಏನು ಜ್ಞಾಪಕ ಬರ್‍ತಾ ಇಲ್ಲ. ಗುಲಾಮರು ಅಂದ್ರೆ ಯಾವುದೊ ಅಮೇರಿಕದಲ್ಲಿನ ನೀಗ್ರೊಗಳು ಅಲ್ಲ, ಇಲ್ಲಿ ನಮ್ಮ ಭವ್ಯ ಪರಂಪರೆಯ ಭಾರತದಲ್ಲಿನ ಗುಲಾಮರು. ಇನ್ನು ಸ್ಪಷ್ಟವಾಗಿ ಹೇಳಬೇಕು ಅಂದ್ರೆ ಈ ದೇಶದ ಹರಿಜನರು. ನಾನು ಅವರಲ್ಲೊಬ್ಬಳು. ಆದ್ರೆ ಊಟ ಬಟ್ಟೆಗಾಗಲಿ, ಹಣಕಾಸು, ವಿದ್ಯೆಗಾಗಲಿ ಯಾವುದೆ ತೊಂದರೆ ಅನುಭವಿಸದೆ ಸುಖವಾಗಿ ಬೆಳೆದವಳು. ದೊಡ್ಡ ಸರ್ಕಾರಿ ಅಧಿಕಾರಿಯ ಮಗಳಾಗಿದ್ದಕ್ಕೆ ಯಾವ ತೊಂದರೆಯನ್ನು ಅನುಭವಿಸಲಿಲ್ಲ. ಹಣ, ಅಂತಸ್ತು ಎಲ್ಲಾ ರೀತಿಯಲ್ಲೂ ಹೆಚ್ಚು ಕಮ್ಮಿ ಮೇಲ್ವರ್ಗಕ್ಕೆ ಸೇರಿದವಳು. ಜಾತಿಯ ವಿಷಯ ಬಂದಾಗ ತೀರ, ತೀರ ಕೆಳಕ್ಕೆ. ಅಂದ್ರೆ ನನ್ನಪ್ಪ ಗೌಡರ ಮನೆಯಲ್ಲಿ ಸಗಣಿ ಬಳಿದು, ಎಮ್ಮೆ ಕಾಯುತ್ತಿದ್ದವ, ಅವನಪ್ಪ ಹಾಗು ಅವನ ಸಂಬಂಧಿಕರೆಲ್ಲಾ ಚಪ್ಪಲಿ ಹೊಲೆಯುತ್ತಿದ್ದವರು, ಊರಲ್ಲಿ ಸತ್ತ ದನವನ್ನು ಕೊಯ್ದು ತಿನ್ನುತ್ತಿದ್ದವರು, ಗೌಡರಲ್ಲಿ ಜೀತಕ್ಕಿದ್ದವರು.

ನಾನು ಚಪ್ಪಲಿ ಹೊಲೆಯದಿದ್ದರು, ಹಣ ಅಂತಸ್ತಿದ್ದರೂ ಜಾತಿಗಾಗಿ ವಿವಿಧ ಸಂದರ್ಭಗಳಲ್ಲಿ ಅವಮಾನಿತಳಾಗಿದ್ದೇನೆ, ನಿಂದಿಸ್ಪಟ್ಟಿದ್ದೇನೆ, ನೋವುಂಡಿದ್ದೇನೆ. ಯಾರದ್ರು ಜಾತಿ ಕೇಳಿದಾಕ್ಷಣ ಮೈಯೆಲ್ಲಾ ನಡುಗಿ ಕುಗ್ಗಿ ಹೋಗಿದ್ದೇನೆ. ಅಂತಹ ಹಲವು ಸಂದರ್ಭಗಳಲ್ಲಿ ಇದು ಒಂದು.

ಊರು ಸುತ್ತುವುದು ನನ್ನ ಚಟ. ಊರು ಚೆಂದವಾಗಿದ್ದರೆ, ಪ್ರಶಾಂತವಾಗಿದ್ದರೆ ಎಲ್ಲಿದ್ದರೂ ಹೋಗಿ ಬರುವ ಅಭ್ಯಾಸ. ಹೀಗೆ ಬಮ್ಮೆ ಮೇಲು ಕೋಟೆಗೆ ಹೋಗಿದ್ದೆ, ಊರಿನ ತುಂಬಾ ಸುಂದರವಾದ ಕಲ್ಯಾಣಿಗಳು, ಗಂಭೀರವಾಗಿ ನಿಂತ ಬಂಡೆಗಳು, ಬಂಡೆಯೊಳಗೆ ಗುಹೆಗಳು, ಬೆಟ್ಟದ ಮೇಲೊಂದು ದೇವಸ್ಥಾನ. ಮೇಲೆ ನಿಂತು ನೋಡಿದರೆ ಸೊಗಸಾಗಿ ಕಾಣುವ ಊರು. ಹಾಗೆ ಬೆಟ್ಟದ ಮೇಲೆ ಮೈ ಚಾಚಿ ಮಲಗಿ ನಕ್ಷತ್ರಗಳನ್ನ ಎಣಿಸ್ತಾ ಎಣಿಸ್ತಾ ಹಾಗೆ ಕರಗಿ ಹೋಗ್ತಾ ಇದ್ದೆ .... .... .... ಹೀಗೆ ಚೆನ್ನಾದ ಊರು, ಸ್ವಂತಿಕೆ ಉಳಿಸಿಕೊಂಡಿರೂ, ಕ್ರೂರ್ ಆಗಿರೊ ಊರು, ಹುಚ್ಚು ಮನಸ್ಸಿಗೆ ಕಿಚ್ಚು ಹುಟ್ಟಿಸೊ ಪ್ರಕೃತಿ. ಪ್ರಕೃತಿ ಸುಂದರ, ಕುರೂಪತೆಗೆ ಅಲ್ಲಿ ಜಾಗವೆ ಇಲ್ಲ. ಯಾಕೋ ಅವಳ ಮಡಿಲ ಮಕ್ಕಳಲ್ಲಿ ಕುರೂಪತೆ ಸಾಕಷ್ಟಿದೆ. ಆ ಕುರೂಪತೆಯನ್ನ ಅಲ್ಲಿ ನೋಡಿದೆ.

ಬೆಟ್ಟದ ಮೇಲಿನ ನರಸಿಂಹ ದೇವಸ್ಥಾನಕ್ಕೆಂದು ಹೊರಟಿದ್ದೆವು, ಸಾಕಷ್ಟು ಮೆಟ್ಟಿಲುಗಳನ್ನ ಹತ್ತಬೇಕು. ನಾವು ನಾಲ್ವರು ಸ್ನೇಹಿತೆಯರು ಮಾತಾಡಿಕೊಂಡು ಹತ್ತುತ್ತಿದ್ದೆವು. ನಡುವೆ ಸುಸ್ತಾಯಿತು. ಅಲ್ಲೇ ಮರದ ಕೆಳಗೆ ಇದ್ದ ಕಟ್ಟೆಯಂತಹ ಜಾಗದಲ್ಲಿ ಕೂತ್ವಿ. ನಾನಂತೊ ಸಲೀಸಾಗಿ ಕಾಲುಚಾಚಿ ಮಲಗಿಕೊಂಡೆ, ಮೆಟ್ಟಿಲುಗಳ ಕಡೆಗೆ ಮುಖಮಾಡಿಕೊಂಡೆ. ಎದುರಿಗೆ ಇಬ್ಬರು ಬಿಕ್ಷುಕಿಯರು, ಒಬ್ಬಳು ನಡುವಯಸ್ಸಿನವಳು, ಇನ್ನೊಬ್ಬಳು ಮುದುಕಿ. ಇಬ್ಬರು ಹರಕಲು ಸೀರೆಯವರು. ದೇವಸ್ಥಾನಕ್ಕೆ ಹೋಗಿ ಬರುವವರು ಎಸೆಯುವ ಕಾಸಿಗೂ, ತಿಂಡಿಗೂ ದೀನರಾಗಿ ಕಾದು ಕುಳಿತವರು. ಆ ಊರಿನ ಬ್ರಾಹ್ಮಣರೆನಿಸಿಕೊಂಡವರು (ಕಚ್ಚೆ ಜುಟ್ಟು, ನಾಮಧಾರಿಗಳು) ಮೇಲೆ ಬರುವ ಅಥವಾ ಇಳಿಯುವ ವಾಸನೆ ಕಂಡರೂ ಸಹ ಸರಕ್ಕನೆದ್ದು ಹೋಗಿ ಮರದ ಹಿಂದೆ ನಿಂತುಕೊಂಡು, ಅವರು ಹೋದ ನಂತರ ಹಿಂದಿರುಗಿ ಬಂದು ಕುಳಿತುಕೊಳ್ಳುತ್ತಿದ್ದರು. ಮೊದಲಿಗೆ ಏನು ಅಂತ ತಿಳಿಯಲಿಲ್ಲ, ಎಲ್ಲೊ ಎಲೆ ಅಡಿಕೆ ಉಗಿಯಲು ಏಳುತ್ತಿದ್ದರೆಂದುಕೊಂಡೆ. ನಾಲ್ಕೈದು ಸಾರಿ ಹೀಗೆ ಆಯಿತು. ಆಶ್ಚರ್ಯ ಆಗಿ ಯಾಕೆಂದು ಅವರನ್ನೆ ಕೇಳಿದೆ. ಅದಕ್ಕೆ ಅವರು "ಬ್ರಾಮರು,

ಅಯ್ಯನೋರು ಬತ್ತಾ ಇರೋವಾಗ ನಾವು ದಾರಿಗ್ ಮುಂಚವು ಕೊತ್ಕೊಬೌದ? ಅವರು ಬಯ್ಯಾಕಾಕಿಲ್ವಾ ನಾವು ಅವರ್‍ಗೆ ಕಾಣ್ಸ್ಕಬಾರ್ದು ಅಂತ ಅತ್ತಾಗೆ ಒತೀವಿ ಅಂದ್ರು. ಕಳ್ ಕರುಳನ್ನೆಲ್ಲಾ ಯಾರೊ ಹಿಡಿದು ಎಳೆದಂಗೆ ಆಯ್ತು. ಒಂದು ಕ್ಷಣ ಆವೇಲೆ ರೋಷ ಉಕ್ಕಿ ಭುಗಿಲ್ ಅಂತು ಆದ್ರೆ ಸುಡೊ ಶಕ್ತಿ ಇರ್‍ಲಿಲ್ಲ. ಧಡಕ್ ಅಂತ ಎಂದೆ. ಎದೆಸೆಟೆಸಿ, ಕಟ್ಟೆಮೇಲೆ ಕಾಲು ಇಳಬಿಟ್ಟುಕೊಂಡು ಕೊತೆ, ಯಾವ ಬ್ರಾಹ್ಮಣನನ್ನ ದಾಗ ಹೋಗ್ತಾನೊ ಹೋಗ್ಲಿ ಅಂತ. ಯಾವ ಬ್ರಾಹ್ಮಣ ಬಂದ್ರು ದಿಟ್ಟಿಸಿನೋಡ್ತಾ ಇದ್ದೆ ಅವರು ನೋಡಿಕೊಂ ಡುಹೋಗ್ತಾ ಇದ್ರು. ಯಾವನಿಗೂ ಏನು ಆಗ್ಲಿಲ್ಲ ನನ್ನ ಹೊಟ್ಟೆಯೊಳಗಿನ ಸಂಕಟ ಅವರ್‍ನ ಸುಡೊದಿರ್‍ಲಿ ನನ್ನ ಕರುಳನ್ನೆ ಬುದಿ ಮಾಡಾತಾ ಇತ್ತು. ನಾನು ಎದೆಸೆಟೆಸಿ ಕೂತ್ತಿದ್ದು ಅಷ್ಟೆ ನಾನೂ ಮಾಡಿಗಿತ್ತಿ ಅಂತಾ ಜೋರಾಗಿ ಅರಚಿಕೊಳ್ಳೊ ತಾಕತ್ ಇರಲಿಲ್ಲ.

ಹಸಿದಿರೊ ನಾಯಿಗಳನ್ನ ಸುಮ್ಮನಿರ್‍ಸೋಕೆ ಬ್ರೆಡ್ ಎಸೆಯೋಥರ ಇವರು ಕೊಡೊ ದೀಣಿಗೆ. ಧನಸಹಾಯ ತಾಕತ್ತನ್ನ ನೀಡೋದಿಲ್ಲ ಉರಿದೆ ಎತ್ತದ ಹಾಗೆ ಮಾಡುತ್ತೆ. ನನಗೆ ಇವರ ಎಂಜಲು ಬೇಡ, ನನಗೆ ಎಲ್ಲರ ಎದುರಿಗೆ ಅಭಿಮಾನದಿಂದ ತಲೆ ಯೆತ್ತಿ, ರಾಜಾರೋಷವಾಗಿ ನಾನು ಮಾದಿಗ್ರೋಳು ಅಂತಹೇಳೊ ತಾಕತ್ ಬೇಕು. ಇವರ ದೇವಸ್ಥಾನ ಗಳ ಒಳಗೆ ಹೋಗಿ. ದೇವರನ್ನು ಕೈಯಲ್ಲಿ ಮುಟ್ಟ ಬೇಕು. ಹೊಲಸು ತುಂಬಿರೋದು ನಮ್ಮಲ್ಲಿಲ್ಲ ಅವರ ಮನಸ್ಸಲ್ಲಿ. ಪರಿಶುದ್ಧತೆ ಮನಸ್ಸಿಗೆ ಬೇಕಾಗಿ ರೋದು ಮನಸ್ಸಿಗೆ ಅಂತ ಕೂಗಬೇಕು.

ಸರಸ್ವತಿ. ಡಿ

---

# ಸೀಮಿತ ಅನುಭವ ಮಹಿಳಾ ಸಾಹಿತ್ಯ

ಡಿಸೆಂಬರ್ 25ನೇ ತಾರೀಖ್ 1988 ರಲ್ಲಿ ಕರ್ನಾಟಕ ಲೇಖಕಿಯರ ಸಂಘದ ಆಶ್ರಯದಲ್ಲಿ 'ಅನುಪಮಾ' ಅಭಿನಂದನ, ಪುಸ್ತಕದ ಬಿಡುಗಡೆ ಸಮಾರಂಭ ನಡೆಯಿತು. ಗ್ರಂಥ ಬಿಡುಗಡೆ ಮಾಡಿದ ಶ್ರೀ ಚನ್ನವೀರಕಣವಿಯವರು ನಿರಂಜನ ದಂಪತಿಗಳ ಸಾಹಿತ್ಯದ ಬಗ್ಗೆ, ಪ್ರಭಾವದ ಬಗ್ಗೆ ಮಾತನಾಡುತ್ತಾ, ಮಹಿಳೆಯರಿಗೆ ಸೀಮಿತ ಅನುಭವವಿದೆ. ಆ ಅನುಭವವನ್ನೇ ಜನಪ್ರಿಯತೆಗಾಗಿ ಬರೆಯಬಾರದು: ಸಂವೇದನಾಶೀಲರಾಗಿ ಬರೆಯಬೇಕು ಎನ್ನುತ್ತಾ, ಅನಪಮಾರವರು ಹೀಗೆ ಸಂವೇದನಾಶೀಲ ಲೇಖಕಿಯಾಗಿದ್ದಾರೆ ಎಂದರು.

ಅನುಪಮಾರವರ ಸಾಹಿತ್ಯಕ ಬೆಳವಣಿಗೆಯನ್ನು ಗುರುತಿಸಿ, ಅಭಿನಂದನ ಭಾಷಣ ಮಾಡಿದ ಡಾ। ವಿಜಯಾದಬ್ಬೆಯವರು ಐವತ್ತರ ದಶಕದಲ್ಲಿ ಪ್ರಗತಿಶೀಲ ಬರವಣಿಗೆಯಿಂದ ಅನುಪಮಾರವರ ಸಾಹಿತ್ಯ ಪ್ರಭಾವ ಹೊಂದಿದ್ದರೂ, ಜನಪ್ರಿಯತೆಯತ್ತ ಮುಖ ಮಾಡಿತ್ತು ಎಂದರು. ಆದರೆ ಇವರು ಆ ನಂತರದಲ್ಲಿ ಸಾಹಿತ್ಯಕವಾಗಿ ಬಹಳಷ್ಟು ಬೆಳೆದು, ಈ ದಿನ ಇಂದಿನ ತಲೆ ಮಾನವ ಗೂ ಹತ್ತಿರವಾಗುವಷ್ಟು ಸೂಕ್ಷ್ಮವಾಗಿ ಸ್ಪಂದಿಸಿ ಬರೆಯತೊಡಗಿದ್ದಾರೆ ಎಂಬುದನ್ನು ಗಮನಿಸಬೇಕು ಎಂದರು. 'ಆಳ' — ಅನುಪಮಾ ರವರ ಕಾದಂಬರಿ ಇಂತಹ ಸೂಕ್ಷ್ಮ ಸಂವೇದನೆಗೆ ಉದಾಹರಣೆಯಾಗಿದೆ ಎಂದರು.

ಶ್ರೀ ಚನ್ನವೀರ ಕಣವಿಯವರ 'ಸೀಮಿತ ಅನುಭವದ' ವಿಷಯವನ್ನು ತಮ್ಮ ಭಾಷಣದ ಪ್ರಥಮದಲ್ಲಿ ಪ್ರಸ್ತಾಪಿಸಿದ ಡಾ। ವಿಜಯಾರವರು ಲೇಖಕಿ ಲೇಖಕನಿಗೆ ಅನುಭವ ಎಷ್ಟು ದೊಡ್ಡದು ಎಂಬುದು ಮುಖ್ಯವಲ್ಲ ಖಂಡಗಳ ಬಗ್ಗೆ ಬರೆಯುವುದು ಮುಖ್ಯವಲ್ಲ, ಆದರೆ ನಮ್ಮ ಅನುಭವದ ಮನಸ್ಸಿನ ಪದರು, ಪದರುಗಳನ್ನು ಕುರಿತು ಬರೆಯುವುದು ಮುಖ್ಯ ಎಂದು ಒತ್ತಿ ನುಡಿದ ಇವರು—ಶ್ರೀ ಚೆನ್ನವೀರಕಣವಿಯರ ಸಾಹಿತ್ಯ ಅನುಭವದ ತಪ್ಪು ಗ್ರಹಿಕೆಯನ್ನು ಖಂಡಿಸಿದರು.

ಟಿ. ಸುನಂದಮ್ಮ, ಸರಿತ ಕುಸುಮಾಕರ ದೇಸಾಯಿ, ಉಷ ಪಿ. ರೈ ರವರು ಅಭಿನಂದನ ಭಾಷಣ ಮಾಡಿದರು. ಡಾ। ಸಿದ್ದಯ್ಯ ಪುರಾಣಿಕರವರು ಅಧ್ಯಕ್ಷತೆ ವಹಿಸಿದ್ದರು.

ಹೃದಯ ತುಂಬಿ ಮಾತನಾಡಿದ ಅನುಪಮಾರವರು 'ಪುರಂದರದಾಸರ ಇಂಥ ಭಾಗ್ಯವೊ' ಎನ್ನುವ ಸಾಲುಗಳನ್ನು ನೆನ ಪಿಸಿಕೊಂಡರು. ವಿಜಯಾರವರು ಗುರುತಿಸಿದ ತಮ್ಮ ಸಾಹಿತ್ಯಕ ಬೆಳವಣಿಗೆಯನ್ನು ಒಪ್ಪಿಕೊಂಡ ಇವರು ಸಾಹಿತ್ಯ ರಚನೆಗೆ ಶೋಧನೆ, ಚಿಂತನೆ, ಅಧ್ಯಯನಗಳ ಅಗತ್ಯ ತುಂಬಾ ಇದೆಯೆಂದರು. ಸತ್ಯ ಅನ್ವೇಷಣೆಗೆ ಶೋಧನೆ ಅಗತ್ಯ ಎಂಬುದನ್ನೂ ಇವರು ನುಡಿದರು.

ಅನೇಕ ಲೇಖಕಿಯರ ಮಿಲನಕ್ಕೆ ಕಾರಣವಾದ ಈ ಸುಂದರ ಸಂಜೆಯ ವಾತಾವರಣ ಆಹ್ಲಾದಕರವಾಗಿತ್ತು.

# ಮಹಿಳೆ ಮತ್ತು ಸ್ವಾವಲಂಬನೆ

ಸೃಷ್ಟಿಯ ದೃಷ್ಟಿಯಲ್ಲಿ ಎರಡೇ ಜಾತಿ. ಮಾನವ ಮತ್ತು ಮಾನವಿ. ದೈಹಿಕ ಅಂಗ ರಚನೆಯಲ್ಲಿ ವ್ಯತ್ಯಾಸ ಹೊಂದಿರುವ ಇವರೀರ್ವರೂ ಊಟ, ಉಪಚಾರ, ಆಹಾರ. ವಿಚಾರ, ವ್ಯವಹಾರ, ಆಸೆ, ಆಕಾಂಕ್ಷೆಗಳಲ್ಲಿ ಸಮಾನ ಮನೋಧರ್ಮವುಳ್ಳವರಾಗಿರುತ್ತಾರೆ. ಪ್ರಾಕೃತಿಕ ನಿಯಮದಂತೆ ಮಾನವಿ ಮಾನವನಿಗಿಂತ ದೈಹಿಕಬಲದಲ್ಲಿ ಕೊಂಚ ದುರ್ಬಲಳಾಗಿರುವುದೇ ಮಾನವ ಸೃಷ್ಟಿಯ ಶ್ರೇಷ್ಠಕೊಡುಗೆ ಎಂದು ಭಾವಿಸಲು ಕಾರಣವಾಗಿದೆ. ಪ್ರತಿ ತಿಂಗಳ ರಕ್ತಸ್ರಾವ. ಬಸಿರಿನ ಭಾರ, ಹೆರಿಗೆಯನೋವು ಇವುಗಳಿಂದ ಬಲಹೀನತೆಗೊಳಗಾಗುವ ಮಾನವಿ, ಸೃಷ್ಟಿಯ ಎರಡನೇ ಕೊಡುಗೆ ಎನಿಸಿ, ದ್ವಿತೀಯಸ್ಥಾನ ಪಡೆದಿದ್ದಾಳೆ. ಜನ್ಮದಾತೆಯಾಗಿದ್ದೂ.

ಈ ಆಧುನಿಕಯುಗದಲ್ಲಿ ಈ ಎಲ್ಲಾ ಭಾರ, ನೋವುಗಳನ್ನನುಭವಿಸಿಯೂ .ಮಾನವಿ ಮಾನವನ ಸಮಸಮಕ್ಕೆ ಓದಿ ವಿದ್ಯಾವಂತೆಯೆನಿಸಿ ಎಲ್ಲಾ ಬಗೆಯ ಕಾರ್ಯಗಳನ್ನು ನಿರ್ವಹಿಸಬಲ್ಲಂಥ ಚಾಕಚಕ್ಯತೆಯನ್ನು, ನೈಪುಣ್ಯತೆಯನ್ನು ಪಡೆದು ಸಫಲಳಾಗುತ್ತಿರುವುದು ಹೆಮ್ಮೆಯ ವಿಷಯ. ಪುರುಷನ ಎಲ್ಲಾ ಕಾರ್ಯಕ್ಷೇತ್ರಗಳಲ್ಲೂ ಶರವೇಗದಿಂದ ದಾಪುಗಾಲು ಹಾಕುತ್ತಾ, ಪಂಚಾಸ್ಯದಂತೆ ನುಗ್ಗುತ್ತಿರುವ ಸ್ತ್ರೀ, ಮಗಳು, ಹೆಂಡತಿ, ತಾಯಿ, ಅತ್ತೆ, ಅಜ್ಜಿ ಹೀಗೆ ಪ್ರಮುಖವಾಗಿ ಪಂಚಮುಖಗಳನ್ನು ಹೊಂದಿದ್ದಾಳೆ. ಈ ಪಂಚಮುಖಗಳು ಅವಳ ಬದುಕಿನ ವಿವಿಧ ಸ್ತರಗಳು. ಪ್ರತಿಸ್ತರದಲ್ಲಿಯೂ ಈ ಪಂಚಮುಖಿ ಹೇಗಿದ್ದಳು, ಹೇಗಿದಾಳೆ,? ಹೇಗಿದ್ದರೆ ಅವಳ ಸರ್ವತೋಮುಖವಾದಂಥ ಬೆಳವಣಿಗೆ ಸಾಧ್ಯ ಎಂದು ವಿಚಾರ ಮಾಡುವುದೇ ಈ ಲೇಖನದ ಉದ್ದೇಶ.

ಹೆಣ್ಣುಮಗಳು ತಂದೆ ತಾಯಿಯ ಅಕ್ಕರೆಯ ಕಣ್ಮಣಿಯಾಗಿರುತ್ತಾಳೆ. ಅವಳು ತನ್ನ ಕೆಲಸ, ಜಾಣ್ಮೆ, ಮೆಲುಮಾತುಗಳಿಂದ ಮನೆಯವರೆಲ್ಲರ ಕಣ್ಮಣಿ ಎನಿಸುತ್ತಾಳೆ. ಹಿಂದೆ ಮಗಳು ಮೈನೆರೆದೊಡನೆ ಶಾಲೆ ಬಿಡಿಸಿಬಿಡುತ್ತಿದ್ದರು. ಹೆಚ್ಚೆಂದರೆ ಎಸ್. ಎಸ್. ಎಲ್. ಸಿ ವರೆಗೆ ಓದು. ನೌಕರಿಗೆ ಹೋಗುವವರು ಕಡಿಮೆಯೇ. ಆದರೆ ಇಂದು ಕಾಲ ಬದಲಾಗಿದೆ. ಹುಡುಯರೂ. ಅವರ ತಂದೆ ತಾಯಿಯರೂ ಎಚ್ಚೆತ್ತಿದ್ದಾರೆ. ಹೆಣ್ಣುಮಕ್ಕಳೂ ಚೆನ್ನಾಗಿ ಓದಿ ಹೆಚ್ಚಿನ ಅಂಕಗಳನ್ನು ಗಳಿಸಿ ಮೆಡಿಕಲ್, ಇಂಜಿನಿಯರಿಂಗ್, ಲಾ, ಎಲ್ಲಾ ಕೋರ್ಸುಗಳನ್ನು ಓದಿ ಮುಂದೆಬರುತ್ತಿರುವುದು ಸಂತಸದ ವಿಷಯ. ಓದು ಮುಗಿದೊಡನೆ ಮಗಳ ಮದುವೆ ಮಾಡಿ ಮುಗಿಸಬೇಕೆನ್ನುವುದಕ್ಕಿಂತ ಉದ್ಯೋಗಕ್ಕೆ ಸೇರಿ ಸ್ವಾವಲಂಬಿಯಾದ ನಂತರ, ಮದುವೆ ಮಾಡಬೇಕೆನ್ನುವ ಪ್ರಜ್ಞೆ ಹೆಚ್ಚುತ್ತಿರುವುದು ಗಣನೀಯವಾದ ಅಂಶ. ಹಳ್ಳಿಗಳಲ್ಲೂ ನಗರದಂತೆ ಹೆಣ್ಣುಮಕ್ಕಳ ವಿದ್ಯಾಭ್ಯಾಸದ ಅಗತ್ಯವನ್ನು ಹೆಚ್ಚು ಹೆಚ್ಚಾಗಿ ಅರಿತುಕೊಳ್ಳಬೇಕಾಗಿರುವುದು ಅನಿವಾರ್ಯವಾಗಿದೆ. ಹಳ್ಳಿ ಹಾಗೂ ಪಟ್ಟಣಗಳಲ್ಲಿ ಅವಿದ್ಯಾವಂತ ಮಹಿಳೆಯರು ಕೂಲಿ, ನಾಲಿ ಮಾಡಿ ಹೊಟ್ಟೆ ಹೊರೆದುಕೊಂಡು ಸ್ವಾವಲಂಬಿಗಳಾಗಿ ಬಾಳುತ್ತಿರುವುದ ಸರ್ವೇಸಾಮಾನ್ಯವಾದ ನೋಟವಾಗಿದೆ.

ವಿದ್ಯಾವಂತೆಯೂ ಸ್ವಾವಲಂಬಿಯೂ ಆದ ಹೆಣ್ಣುಮಗಳು ಮುಂದೆ ಮಡದಿಯ ಸ್ಥಾನಕ್ಕೇರುತ್ತಾಳೆ. ವರದಕ್ಷಿಣೆಯ ಪಿಡುಗು ಎಲ್ಲೆಲ್ಲೂ ತನ್ನ ಕರಾಳಹಸ್ತವನ್ನು ಚಾಚಿದ್ದರೂ ವಿದ್ಯಾವಂತ ಸ್ವಾವಲಂಬಿ ಮಹಿಳೆ ಈ ಪಿಡುಗಿನಿಂದ ತನ್ನನ್ನುತಾನು ರಕ್ಷಿಸಿಕೊಳ್ಳಲು. ಹೋರಾಡಲು ಸಮರ್ಥಳೆನಿಸುತ್ತಾಳೆ. ಹಿಂದೆ ವಧು ಪರೀಕ್ಷೆ ನಡೆದಾಗ ಹುಡುಗಿಗೆ ಅಡಿಗೆ ಮನೆ ಕೆಲಸ ಬರುತ್ತದೆಯೇ ? ಹಾಡು, ಹಸೆ, ಕಸೂತಿ ಪ್ರಾವೀಣ್ಯತೆಯ ಬಗೆಗೆ ಪ್ರಶ್ನಿಸಲಾಗುತ್ತಿತ್ತು. ಆದರೆ ಇಂದಿನ ಹುಡುಗರು ನಿರೀಕ್ಷಿಸುವುದೇ ಬೇರೆ. ಹುಡುಗಿ ಏನು ಓದಿದ್ದಾಳೆ ? ಯಾವ ಬ್ಯಾಂಕಿನಲ್ಲಿ ಅಥವಾ ಆಫೀಸಿನಲ್ಲಿ ಕೆಲಸ ? ಸಂಬಳ ಎಷ್ಟು ? ಹೀಗೆ. ಬಹಳಷ್ಟು ಹುಡುಗರು ಉದ್ಯೋಗಸ್ಥ ಹುಡುಗಿಯರನ್ನು ಮದುವೆಯಾಗಲಿಚ್ಚಿಸುವುದು ಸರ್ವೇಸಾಮಾನ್ಯವಾಗಿದೆ. ಕಾಲಸ್ಥಿತಿಯೂ ಹಾಗೆ ಇದೆ. ನಿತ್ಯೋಪಯೋಗಿ ಪದಾರ್ಥಗಳ ಬೆಲೆಯೂ ಗಗನಕ್ಕೇರಿರುವ ಈ ಕಾಲದಲ್ಲಿ ಒಬ್ಬನ ಸಂಪಾದನೆಯಿಂದ ಸಂಸಾರ ತೂಗಿಸುವುದು ಕಷ್ಟವೆನಿಸುವುದರಿಂದ, ಮಡದಿಯಾದವಳು ಗಂಡನಿಗೆ ಆರ್ಥಿಕಗಳಿಕೆಯಲ್ಲಿಯೂ ಹೆಗಲುಕೊಡುವುದು ಅಗತ್ಯವೆನಿಸಿದೆ. ಆದರೆ ಇದರಿಂದ ಮನೆಯ ಒಳಗಡೆ ಬೇರೆ ತರನಾದ ಸಮಸ್ಯೆ ಉದ್ಭವಿಸುತ್ತದೆ. ಗೃಹಕೃತ್ಯಗಳನ್ನು ನಿಭಾಯಿಸುವುದು. ಮನೆಯಲ್ಲಿ ಅತ್ತೆಮಾವಂದಿರ ಯೋಗಕ್ಷೇಮ, ಹುಟ್ಟಿದ ಮಕ್ಕಳ ಪಾಲನೆ. ಪ್ರೋ

ಷಣೆ ಹೀಗೆ ಒಳಹೊರಗೆ ದುಡಿಯುವಲ್ಲಿ ಹುಡುಗಿಯರಿಗೆ ಉಂಟಾಗುವ ಸಮಸ್ಯೆಗಳನ್ನು ನಿವಾರಿಸುವಲ್ಲಿ ಯುವಕರು ಸಮಾನಭಾಗಿಗಳಾದಲ್ಲಿ ಸಹಕರಿಸಿದಲ್ಲಿ ಯಾವ ತೊಂದರೆ ಇರುವುದಿಲ್ಲ.

ತಾಯಿಯಾದ ಹೆಣ್ಣುಮಗಳ ಜವಾಬ್ದಾರಿ ಬಹಳಷ್ಟೇ ಹೆಚ್ಚಿರತ್ತದೆ. ಸಂಸಾರದಲ್ಲಿಯೂ ಆ ವೇಳೆಗೆ ಅವಳ ಸ್ಥಾನ ಗಮನಾರ್ಹವಾಗಿರುತ್ತದೆ. ಉದ್ಯೋಗಸ್ಥೆಯೂ ಆಗಿದ್ದಲ್ಲಿ ಹೊರಗೆ ದುಡಿಮೆ ಮಾಡುತ್ತಾ ಗೃಹಕೃತ್ಯವನ್ನು ನಿಭಾಯಿಸುತ್ತಾ ಮಗುವನ್ನು ನೋಡಿಕೊಳ್ಳಬೇಕು. ತಾಯಿ ಎಲ್ಲಿದ್ದರೂ ಅವಳ ಮನಸ್ಸು ಮಗುವಿನಸುತ್ತಾ ಗಿರಕಿ ಹೊಡೆಯುತ್ತಿರುತ್ತದೆ. ಮನೆಯಲ್ಲಿರುವ ಹೆಣ್ಣುಮಗಳು ನೋಡಿಕೊಳ್ಳುವಷ್ಟು ರಕ್ಷೆ, ಮುದ್ದು; ಮುಚ್ಚಟೆ ಉದೋಗಸ್ಥ ಮಹಿಳೆಯ ಮಗುವಿಗೆ ದೊರೆಕದಾದರೂ ಅವಳ ಮಗುವೂ ಅವಳಂತೆ ದೂರದೃಷ್ಟಿಯುಳ್ಳವಳು, ಸ್ವಾವಲಂಬಿಯೂ ಆಗಿ ಬೆಳೆಯುವುದರಲ್ಲಿ ಸಂದೇಹ ವಿಲ್ಲ.

ಮುಂದೆ ಅತ್ತೆಯ ಸ್ಥಾನಕ್ಕೇರುವ ಹೆಣ್ಣುಮಗಳು ಆ ವೇಳೆಗೆ ತನ್ನ ಉದ್ಯೋಗದ ಅತಿ ಉನ್ನತ ಹುದ್ದೆ ತಲುಪಿರುತ್ತಾಳೆ. ಆರ್ಥಿಕವಾಗಿ ಸುಸ್ಥಿತಿಯಲ್ಲಿರುತ್ತಾಳೆ. ತನ್ನ ಮಕ್ಕಳ ಭವಿಷ್ಯತ್ತನ್ನು ಬೆಳಗುವಲ್ಲಿ, ರೂಪಿಸುವುದರಲ್ಲಿ ಸಮರ್ಥಳಾಗಿರುತ್ತಾಳೆ.

ಹೆಣ್ಣಿನ ಅತ್ಯುನ್ನತ ಹಾಗೂ ಕೊನೆಯ ಸ್ತರವೇ ಅಜ್ಜಿಯದು. ಈ ವೇಳೆಗೆ ಅವಳು ಕೆಲಸದಿಂದ ನಿವೃತ್ತಳಾಗಿರುತ್ತಾಳೆ. ಅವಳ ಗಂಡು ಹೆಣ್ಣುಮಕ್ಕಳು ಉದ್ಯೋಗಸ್ಥರಾಗಿರುತ್ತಾರೆ. ವಿವಾಹಿತರಾಗಿರುತ್ತಾರೆ. ಜೀವನವೆಲ್ಲಾ ಒಳಹೊರಗೆ ಸಮರ್ಥವಾಗಿ ದುಡಿದು ದಣಿದ ಆಕೆ ತನ್ನ ಸಂಸಾರದೊಂದಿಗೆ ವಿಶ್ರಮಿಸಿಕೊಳ್ಳಲು ಸುಸಮಯ ಅದು.

ಕೆಲವು ಮನೆಗಳಲ್ಲಿ ಹೆಣ್ಣುಮಗಳು ವಿದ್ಯಾವಂತೆಯಾಗಿದ್ದರೂ ಅವಳು ಸೇರಿದ ಮನೆಯವರು ಅವಳು ಹೊರಗಡೆ ದುಡಿಯುವುದನ್ನು ಇಚ್ಛಿಸುವುದಿಲ್ಲ. ಅವರು ಆರ್ಥಿಕವಾಗಿ ಸುಸ್ಥಿತಿಯಲ್ಲಿರುತ್ತಾರೆ. ಒಂದು ವೇಳೆ ಅವಳು ನೌಕರಿಯಲ್ಲಿದ್ದರೆ ಬಿಡಿಸಿ, ಮನೆ ತುಂಬಿಸಿಕೊಳ್ಳುತ್ತಾರೆ. ಇಂತಹ ಸಂದರ್ಭಗಳಲ್ಲಿ ಮದುವೆಯಾದ ಹೊಸತರಲ್ಲಿ ಕಾಲಸರಿಯುವುದು ಗೊತ್ತಾಗುವುದಿಲ್ಲ. ನಂತರ ಒಂದೋ ಎರಡೋ ಮಕ್ಕಳು. ಐದಾರುವರುಷ ಆ ಮಕ್ಕಳ ಲಾಲನೆ ಪಾಲನೆಗಳಲ್ಲಿ ಹೊತ್ತು ಹೋಗುತ್ತದೆ. ನಂತರ ಮಕ್ಕಳು ಶಾಲೆಗೆ ಸೇರಿದ ಮೇಲೆ ಅವರ ಪ್ರಪಂಚವೇ ಬೇರೆ ಇವಳ ಪ್ರಪಂಚವೇ ಬೇರೆ. ಮನೆಕೆಲಸಕ್ಕೆ ಕೊನೆಮೊದಲಿರುವುದಿಲ್ಲ: ದಿನವಿಡೀ ಕೆಲಸಮಾಡಿದರೂ ಮನಸ್ಸು ಖಾಲಿಯಾಗಿರುತ್ತದೆ. ಮುಂದೆ ಮಕ್ಕಳು ಬೆಳೆದು ದೊಡ್ಡವರಾದಂತೆ ಇವಳಿಗೆ ಬಿಡುವು ಹೆಚ್ಚುತ್ತಾ ಹೋಗುತ್ತದೆ. ಆ ಬಿಡುವಿನ ಸಮಯದಲ್ಲಿ ಅವಳಿಗೆ ಯಾವ ವಿಷಯದಲ್ಲಿ ಆಸಕ್ತಿಯಿದೆಯೋ ಆ ವಿಚಾರದಲ್ಲಿ ತನ್ನ ಪ್ರತಿಭೆಯನ್ನು ಬೆಳಸಿಕೊಂಡು, ಸಮರ್ಥವಾಗಿ ಬಳಸಿಕೊಂಡರಷ್ಟೇ ಅವಳ ಬಾಳು ಸಾರ್ಥಕವೆನಿಸುತ್ತದೆ. ಉದಾಹರಣೆಗೆ ಸಂಗೀತ, ಸಾಹಿತ್ಯ. ಹೊಲಿಗೆ, ಕಸೂತಿ, ಪಾಕಶಾಸ್ತ್ರ, ತೋಟಗಾರಿಕೆ ಯಾವುದೇ ಆಗಬಹುದು. ಅದರ ಬಗೆಗೆ ತನ್ನ ಅರಿವನ್ನು ಹೆಚ್ಚಿಸಿಕೊಂಡು ನಾಲ್ಕಾರುಮಂದಿಗೆ ಪ್ರಯೋಜನವಾಗುವಂತೆ ಬದುಕಿದರೆ ಒಳಿತು.

ಒಟ್ಟಿನಲ್ಲಿ ಮಹಿಳೆಗೆ ವಿದ್ಯಾಭ್ಯಾಸ ಅತ್ಯಗತ್ಯ. ಉದ್ಯೋಗಸ್ಥೆಯಾಗಿ ಆರ್ಥಿಕ ಸ್ವಾತಂತ್ರ್ಯ ಪಡೆದಿರುವುದು ಉತ್ತಮ. ಇದರಿಂದ ಎಲ್ಲಾ ಬಗೆಯ ಸಂದರ್ಭಗಳನ್ನು ಎದುರಿಸುವ ಧೈರ್ಯ ಆಕೆಗಿರುತ್ತದೆ. ಪರಿಸರದ ಕಾರಣದಿಂದ ಉದ್ಯೋಗಸ್ಥಳಾಗಲು ಸಾಧ್ಯವಾಗದೇ ಹೋದಾಗಲೂ, ತನಗಿರುವ ಸೀಮಿತ ಚೌಕಟ್ಟಿನಲ್ಲೇ ಸಮಯದ ಮಹತ್ವವರಿತು ಸ್ವಾವಲಂಬಯಾಗಿ ಬಾಳುವುದನ್ನು ಕಲಿತರೆ ತನ್ನ ಸಂಸಾರದ ಹಾಗೂ ಸಮಾಜದ ಏಳಿಗೆಯನ್ನು ಸಾಧಿಸಿದಂತಾಗುವುದು.

ಭಾರತಿ ಕೇಶವ್

---

ರಾಜಸ್ತಾನದಲ್ಲಿ ವಿದ್ಯಾರ್ಥಿನಿಯರಿಗೆ ವಿದ್ಯಾಭ್ಯಾಸವನ್ನು ಉಚಿತಗೊಳಿಸಲಾಗಿದೆ ಸರ್ಕಾರಿ ಶಾಲಾ ಕಾಲೇಜು ಹಾಗೂ ವಿಶ್ವವಿದ್ಯಾನಿಲಯಗಳ ಮಟ್ಟದಲ್ಲಿ ಸ್ತ್ರೀಯರಿಗೆ ವಿದ್ಯಾಭ್ಯಾಸವನ್ನು ಉಚಿತಗೊಳಿಸಲಾಗಿದೆ.

---

ನಾನು ಹೆಣ್ಣಾಗಿದ್ದರೆ, ಚೆನ್ನಾಗಿತ್ತು, - ಗಾಂಧೀಜಿ.

# ಮೌನ ಮಾತಾದಾಗ

**ಸ್ತ್ರೀಯರಲ್ಲಿ ಮೂಡುತ್ತಿರುವ ಜಾಗೃತಿ ಹಾಗೂ ಬದಲಾಗುತ್ತಿರುವ ಸಾಮಾಜಿಕ ಪರಿಸರದಿಂದಾಗಿ ಸ್ತ್ರೀಯರ ಸಮಸ್ಯೆಗಳನ್ನು ನೋಡುತ್ತಿರುವ ದೃಷ್ಟಿಕೋನಗಳು ಬದಲಾಗುತ್ತಿವೆಯಲ್ಲವೆ? ಇಂತಹ ಆಲೋಚನೆ, ವಿಚಾರಗಳು ಅಸ್ಪಷ್ಟವಾಗಿದ್ದು ವೈರುಧ್ಯಗಳಿಂದ ಕೂಡಿರಬಹುದು. ಮಹಿಳಾ ಶೋಷಣೆ, ಕೌಟುಂಬಿಕ ಜವಾಬ್ದಾರಿ, ವಿವಾಹ ಪದ್ಧತಿ, ವರದಕ್ಷಿಣೆ, ಅಸಮಾನ ವೇತನ ಮುಂತಾದ ವಿಷಯಗಳ ಸುತ್ತ ನಿಮ್ಮ ಸ್ವಂತ ವಿಚಾರಗಳನ್ನು ಹಾಗು ಅನುಭವಗಳನ್ನು ಪುಟ್ಟ ಲೇಖನದ ರೂಪದಲ್ಲಿ ಬರೆದು ಕಳಿಸಿದ ಲೇಖನಗಳಿಗೆಂದು "ಮೌನ ಮಾತಾದಾಗ" ಅಂಕಣವಿದೆ. ಪ್ರಕಟವಾದ ಲೇಖನಗಳಿಗೆ ಪ್ರತಿಕ್ರಿಯೆಗಳನ್ನು ಪ್ರಕಟಿಸಲಾಗುವುದು.**

**ಸಂ. ಮಂಡಲಿ**

## ಹೆತ್ತೊಡಲ ಕಥೆ ವ್ಯಥೆ

ಜಾನಕಮ್ಮನವರ ಗಂಡ ಸತ್ತಾಗ ಅವರಿಗೆ ನಲವತ್ತರ ವಯಸ್ಸು. ಮಕ್ಕಳೆಲ್ಲ ಸಣ್ಣವರು. ಇದ್ದೊಬ್ಬ ಮಗಳಿಗೆ ಮದುವೆಯಾಗಿತ್ತು. ಉಳಿದ ಆರೂ ಜನ ಗಂಡುಮಕ್ಕಳು. ದೊಡ್ಡ ಮಗ ಆಗಷ್ಟೇ ಕಾಲೇಜಿಗೆ ಸೇರಿದ್ದ. ಅಂಗಡಿಯೊಂದರಲ್ಲಿ ಗುಮಾಸ್ತೆಯಾಗಿದ್ದ ಗಂಡನಿಗೆ ಆಸ್ತಿಪಾಸ್ತಿಯೂ ಇರಲಿಲ್ಲ, ಹೀಗಾಗಿ ಜಾನಕಮ್ಮನವರ ಕಣ್ಮುಂದೆ ಬರೀ ಕತ್ತಲೆಯೇ. ಆದರೂ ಧೃತಿಗೆಡದೆ ಮಗಳು ಅಳಿಯನ ಅಲ್ಪ ಸ್ವಲ್ಪ ಸಹಾಯದ ಜೊತೆಗೆ ತಾವೂ ಮನೆಯಲ್ಲಿ ಹಪ್ಪಳ ಸಂಡಿಗೆ ಇತ್ಯಾದಿಗಳನ್ನೆಲ್ಲ ಮಾಡಿ ಮಾರಿ ಮಕ್ಕಳನ್ನೆಲ್ಲ ಸಮಾಜದಲ್ಲಿ ತಲೆಯೆತ್ತಿ ನಿಲ್ಲುವಂತಹ ಸ್ಥಿತಿಗೆ ತಂದು ಮುಟ್ಟಿಸಿದ್ದಾರೆ. ಆದರೆ ಆಕೆಯೇ ಹೇಳುವಂತೆ ಆಕೆ ಅನಾಥೆ.

ಕಾರಣ ಇಷ್ಟೆ. ದೊಡ್ಡಮಗ ವಿದ್ಯಾಭ್ಯಾಸ ಮುಗಿಸಿ ಉದ್ಯೋಗಿಯಾದಾಗ ತಮಗೆ ಸ್ವಲ್ಪ ಸಹಾಯವಾಗಬಹುದೆಂದು ಕನಸು ಕಂಡಿದ್ದ ತಾಯಿಗೆ, ಅವನು ತಮಗೂ ಹೇಳದೆ ತನ್ನಿಷ್ಟಕ್ಕೆ ಮದುವೆ ಮಾಡಿಕೊಂಡಾಗ ಅದರಿಂದ ಚೇತರಿಸಿಕೊಳ್ಳಲು ಬಹಳ ದಿನಗಳು ಬೇಕಾದವು. ಈಕೆ ಸಂಪ್ರದಾಯವಾದಿಯಾದರೂ, ಕಾಲ ಬದಲಾದಂತೆ ತಾವೂ ಬದಲಾಗಬೇಕೆಂಬ ಮನೋಭಾವವುಳ್ಳವರಾದುದರಿಂದ, ಸೊಸೆ ಬೇರೆ ಜಾತಿಯವಳು ಎಂಬ ನೋವಿಗಿಂತ ಮಗ ತಮ್ಮನ್ನು ದೂರ ಮಾಡಿದನಲ್ಲ ಎಂಬ ನೋವೇ ಹೆಚ್ಚಾಗಿತ್ತು. ಎರಡನೆಯವನಿಗೆ ತಾವೇ ನೋಡಿದ ಹೆಣ್ಣನ್ನು ತಂದು ಮದುವೆ ಮಾಡಿಸಿದರು. ಅವನೂ ತನ್ನ ಹೆಂಡತಿಯೊಡನೆ ಬೇರೆ ಮನೆ ಮಾಡಿದ. ನಂತರದ ಮೂರು ಜನ ಗಂಡು ಮಕ್ಕಳದೂ ಇದೇ ಹಾಡು. ಈಕೆಯೇ ಎಲ್ಲ ಮಕ್ಕಳನ್ನೂ ಕಷ್ಟಪಟ್ಟು ಒಂದು ಸ್ಥಿತಿಗೆ ತಂದು ಮುಟ್ಟಿಸಿದರೂ, ಯಾವ ಮಕ್ಕಳಿಗೂ ಅದರ ನೆನಪಿಲ್ಲ. ಕಡೆಯವನೊಬ್ಬ ತಾಯಿಯ ಜೊತೆಯಲ್ಲೇ ಇದ್ದಾನೆ. ಜಾನಕಮ್ಮನವರೇ ಹೇಳುವಂತೆ, "ಅವನಿಗಿನ್ನು ಮದುವೆಯಾಗಿಲ್ಲ. ಅದಕ್ಕೇ ನನ ಜೊತೆಯಲ್ಲಿ ಇದ್ದಾನೆ. ಹೆಂಡತಿ ಬಂದ ಮೇಲೆ ಅವನೂ ಹೆಂಡತಿಯೊಂದಿಗೆ ಹೋಗುತ್ತಾನೆ." ಇಷ್ಟೇ ಸಾಲದೆಂಬಂತೆ, ಹಬ್ಬ ಹರಿದಿನಗಳಲ್ಲೂ ಮಕ್ಕಳು ತಾಯಿಯೊಡನೆ ಬೆರೆಯುವುದಿಲ್ಲ. ಎಲ್ಲರೂ ವಿದ್ಯಾವಂತರೇ, ಸೊಸೆಯಂದಿರೂ, ಉದ್ಯೋಗಿಗಳೇ. ಆದರೂ ತಮ್ಮ ಹೆಂಡತಿಯರ ಮಾತನ್ನು ಮೀರುವ ಧೈರ್ಯ ಯಾರಿಗೂ ಇಲ್ಲ. ಆಕೆಯೇ ಹೇಳುವಂತೆ, ಮನೆಯಲ್ಲಿ ಏನು ವಿಶೇಷವಿದ್ದರೂ ಯಾರೂ ಬರುವುದಿಲ್ಲ, ಯಾವುದೇ ಸಮಾರಂಭವಾಗಲಿ ಛತ್ರ ಮುಂತಾದೆಡೆಗಳಲ್ಲಿ ಮಾಡಿದರೆ ನನ್ನ ಸೊಸೆಯಂದಿರು ತಮ್ಮ ಗಂಡ ಮತ್ತು ಮಕ್ಕಳನ್ನು ಕರೆದುಕೊಂಡು ಬರುತ್ತಾರೆ." ಮೊಮ್ಮಕ್ಕಳಿಗೆ ಅಜ್ಜಿಯೆಂದರೆ ತುಂಬಾ ಇಷ್ಟ ಆದರೆ ಅವಕ್ಕೆ ತಾಯಂದಿರ ಹೆದರಿಕೆ.

ಒಮ್ಮೆ ಯಾವುದೋ ಸಮಾರಂಭಕ್ಕೆಂದು ನೆಂಟರಿಷ್ಟರೆಲ್ಲ ಸೇರಿದಾಗ, ಜಾನಕಮ್ಮನವರ ಹಿತೈಷಿಯೊಬ್ಬರು ನೀವು ಇಷ್ಟು ಜನ ಗಂಡುಮಕ್ಕಳಿದ್ದುಕೊಂಡು, ನಿಮ್ಮಮ್ಮ ನಿಮ್ಮನ್ನು ಸಾಕಿ, ವಿದ್ಯಾವಂತರನ್ನಾಗಿ ಮಾಡಬೇಕಾದರೆ ಪಟ್ಟ ಕಷ್ಟವನ್ನು ಮರೆತಿದ್ದೀರಿ. ಸಾಲದ್ದಕ್ಕೆ ಗಂಡಹೆಂಡತಿಯರಿಬ್ಬಿಬ್ಬರು ದುಡಿದು ಸಂಪಾದಿಸುತ್ತಿದ್ದರೂ ನಿಮ್ಮ ತಾಯಿ ಒಂಬ್ಬಟಿಯಾಗಿ ಬಾಳಬೇಕಲ್ಲ ನೀವು ವಿದ್ಯಾವಂತರಾಗಿ ಏನು ಪ್ರಯೋಜನ? ಎಂದು ಕೇಳಿದರಂತೆ. ಆಗ

ಉತ್ತರ ಕೊಟ್ಟಿದ್ದು ಸೊಸೆಯಂದಿರು. ಒಬ್ಬಳು ಸೊಸೆ "ಇಷ್ಟು ಮಕ್ಕಳನ್ನು ಯಾಕಂತೆ ಹೆತ್ತಿದ್ದು? ಅವರೇನು ನಮ್ಮನ್ನು ಕೇಳಿ ಹೆತ್ರಾ?" ಎಂದರೆ, ಮತ್ತೊಬ್ಬಳು, "ಆದಾದರೂ ಹೋಗಲಿ ಎಂದರೆ ಒಬ್ಬ ಗಾದರೂ ಸರಿಯಾಗಿ ಬುದ್ಧಿ ಕಲಿಸಿದ್ದಾರಾ? ನಾವು ಬಂದು ಇವರಿಗೆ ಬುದ್ಧಿ ಕಲಿಸಬೇಕು." ಎಂದಳಂತೆ. ಹೀಗೆ ಮಾತಿನ ಚಕಮಕಿ ನಡೆಯುತ್ತಿದ್ದಾಗ ಹಿರಿಯ ರೊಬ್ಬರು ಹೇಳಿದರಂತೆ, "ಪಾಪ ಆಕೆಗೆ ಗೊತ್ತಿರಲಿಲ್ಲ, ತಮ್ಮ ಮಕ್ಕಳು ಹೆಂಡಂದಿರ ಗುಲಾಮರಾಗುತ್ತಾರೆ ಎಂದು. ಇಲ್ಲದಿದ್ದರೆ ಸರಿಯಾಗಿ ಬುದ್ಧಿ ಕಲಿಸುತ್ತಿದ್ದರು. ಕಡೆಗೊಬ್ಬಳು ಸೊಸೆರಾಣಿಯ ಷರತ್ತು ಏನೆಂದರೆ, ಅತ್ತೆ ನನ್ನ ಕಾಲು ಮುಟ್ಟಿ, ನಾನು ಇಷ್ಟು ಮಕ್ಕಳನ್ನು ಹೆತ್ತಿದ್ದು ತಪ್ಪಾಯಿತು ಅನ್ನೋ ಹಾಗಿದ್ರೆ ಮಾತ್ರ ನನ್ನ ಮನೆಯಲ್ಲಿ ಬಂದು ಬೇಕಾದರೆ ಎರಡು ದಿನ ಇದ್ದೋಗಲಿ ಎಂದು. ಇಷ್ಟೆಲ್ಲಾ ಮಾತುಕತೆ ಆಗುತ್ತಿದ್ದರೂ ಮಕ್ಕಳಾರೂ ತುಟಿ ಪಿಟಿಕ್ಕೆನ್ನದೆ ಕುಳಿತಿದ್ದರೆಂಬುದೇ ಜಾನಕಮ್ಮನ ಅಳಲು.

ಇಷ್ಟಕ್ಕೂ ಜಾನಕಮ್ಮನವರೇನೂ ರಾಕ್ಷಸಿ ಅತ್ತೆಯಲ್ಲ. ತುಂಬ ಮೃದು ಹೆಂಗಸು, ಮಕ್ಕಳು ಸದಾ ತನ್ನೊಡನೆಯೇ ಇದ್ದು ತಮ್ಮ ಮಾತನ್ನು ಕೇಳಿಕೊಂಡಿರಬೇಕು ಎಂಬ ಸಣ್ಣಬುದ್ಧಿಯ ಹೆಂಗಸಲ್ಲ. ಆಕೆಗೀಗ ವಯಸ್ಸೂ ಆಗಿದೆ. ಹೆಚ್ಚು ಕೆಲಸ ಮಾಡಲೂ ಅಸಾಧ್ಯ. ಮೊದಲಿನಿಂದಲೂ ಮೈಮುರಿದು ದುಡಿದದ್ದು ಸಾಲದ್ದಕ್ಕೆ ಚಿಂತೆಯಲ್ಲಿ ಹಣ್ಣಾದ ಜೀವ. ಹೀಗಾಗಿ ಈಗ ತುಂಬಾ ಅನಾರೋಗ್ಯ ಹೆಚ್ಚು. ಕೆಲಸ ಮಾಡಬೇಡಿ, ಹೆಚ್ಚು ಚಿಂತೆ ಮಾಡಬೇಡಿ, ಹೃದಯ ತುಂಬಾ ದುರ್ಬಲವಾಗಿದೆ ಎಂದು ವೈದ್ಯರು ಹೇಳಿದ್ದಾರೆ. ಆದರೆ ಆಕೆ ಅದನ್ನು ಒಪ್ಪಿಕೊಳ್ಳುವುದೇ ಇಲ್ಲ. ತಮ್ಮದು ಅಷ್ಟು ದುರ್ಬಲವಾದ ಹೃದಯವಾಗಿದ್ದರೆ ಎಂದೋ ತಮ್ಮ ಜೀವ ಹೋಗುತ್ತಿತ್ತು, ತಮ್ಮದು ಕಲ್ಲಿನ ಹೃದಯ ಎಂಬುದು ಇವರ ಅನಿಸಿಕೆ.

ಮಗಳು ತಾಯಿಯನ್ನು ತನ್ನೊಡನಿರುವಂತೆ ಕರೆದರೂ ಈಕೆ ಅಲ್ಲಿಗೆ ಹೋಗುವುದಿಲ್ಲ. ಅಳಿಯನು ಒಳ್ಳೆಯವನೇ ಆದರೂ, ಅವರಿಗೆಲ್ಲಾ ಯಾಕೆ ಸುಮ್ಮನೆ ತೊಂದರೆ ಎಂದು. ಕಡೆಯ ಮಗನೊಂದಿಗಿದ್ದರೂ, ಅವನಿಗೆ ಹೊರೆಯಾಗಿಲ್ಲ. ತಮ್ಮ ಮೊದಲಿನ ಕಾಯಕವನ್ನೇ ಮುಂದುವರಿಸಿಕೊಂಡು ಬಂದಿದ್ದಾರೆ. ಮಕ್ಕಳು ಅವರವರ ಇಷ್ಟದಂತೆ ಜೀವಿಸಲಿ. ಆದರೆ ಹೆತ್ತವರನ್ನು ಕಡೆಗಣಿಸಬಾರದು ಎಂಬ ತಿಳುವಳಿಕೆ ತಮ್ಮ ಮಕ್ಕಳಿಗಿಲ್ಲ ಎಂಬ ಕೊರಗು ಆಕೆಗೆ. ಅದಕ್ಕೆ ಆಕೆ ಯಾವಾಗಲೂ "ಹೆಣ್ಣುಮಕ್ಕಳು ಹುಟ್ಟಿದರೆ ಕೊರಗಬಾರದು. ಯಾಕೇಂದ್ರೆ ಅವರಿಗೆ ಹೆತ್ತವರ ನೋವು ಚೆನ್ನಾಗಿ ಅರ್ಥವಾಗುತ್ತದೆ. ಗಂಡುಮಕ್ಕಳಿಗೆ ಮಾತ್ರ ಆ ಬುದ್ಧಿ ಇರುವುದಿಲ್ಲ. ಒಳ್ಳೆ ಮಗ ಹುಟ್ಟುವುದಕ್ಕಿಂತ ಒಳ್ಳೆ ಸೊಸೆಯನ್ನು ಪಡೆಯಲು ಹೆಚ್ಚು ಪುಣ್ಯಮಾಡಿರಬೇಕು" ಎಂಬುದು ಅವರ ಸಿದ್ಧಾಂತ.

ಗೀತಾ ಜಿ. ಎಸ್.

---

## ನಲ್ಲ

ನಲ್ಲ ನಿನ್ನ
ಬೆಲ್ಲದ ಮಾತು
ಮತ್ತು ಬರಿಸಿತ್ತು.

ನಿನ್ನಮಾತೆಲ್ಲ
ಮೋಹವಾಗಿ
ಕುತ್ತು ತರಿಸಿ

ನೀ ಯಾರೆಂದಾಗ
ಹಗ್ಗವೊಂದು ನನ್ನ
ಕತ್ತು ಬಳಸಿತ್ತು.

ಮಧುಮತಿ.

# ಹಂತಗಳು



ನಾನಾಗ ಸಣ್ಣ ಹುಡುಗಿ
ಚೋಟು ಲಂಗದ ಬೆಡಗಿ
ಮನೆಯ ಮೂಲೆ ಮೂಲೆ ಕೆದರಿ
ಗುಬ್ಬಚ್ಚಿಗಳು ಕಟ್ಟಿದ ಹುಲ್ಲು ಗೂಡನ್ನು
ಗಲಿಗಲಿ; ಬಿಲಿಬಿಲಿ
ಮಾಡಿ, ಓಡಿ ಬಿಡುತ್ತಿದ್ದೆ.
ಆಗೆಲ್ಲ, ಅವ್ವ
ನನ್ನವ್ವ ಓಣಿ ಓಣಿ ಹುಡುಕುತ್ತಿದ್ದಳು
ಉಪ್ಪು-ತುಪ್ಪ ಅನ್ನ ಕಲಸಿ
ಉಣಿಸಲು, ನನ್ನ ಸುತ್ತ ತಿರುಗುತ್ತಿದ್ದಳು
ನಾನು, ಮನೆಯ ಛಾವಣಿ ಹಾರಿ; ನಿಲ್ಲುತ್ತಿದ್ದೆ.

... ... ... ...

ಹೊತ್ತು ಏರಿದಂತೆ
ಊರ ಕೊನೆಯ ಹೊಳೆಯ ದಂಡೆ
ಮೆತ್ತಗುಸಿರ ಹೊರಹಾಕಿ;
ಚಿಗುರ ಹುಲ್ಲ ಹೊತ್ತು, ಕುಣಿಸಿ
ಬಳ್ ಬಳುಕಿ ಸೆಳೆದಾಗ
ಮಳೆಗಾಲದ ಮೊರೆತಕ್ಕೆ ಬೆದರಿ
ಇಳುಕಲ್ಲಿನ ಜಾರು ಮಣ್ಣಿನ ಮೇಲೆ
ಹೆಜ್ಜೆಯನು ಎಣಿಸೆಣಿಸಿ ಊರುತ್ತಿದ್ದೆ
ಆಗೆಲ್ಲ, ಅವ್ವ
ನನ್ನವ್ವ; ನನ್ನ ಸುತ್ತ
ಪಾಠ ಹೇಳುತ್ತಾ - ನಗುತ್ತಿದ್ದಳು
ಹೇಳಿದ್ದೇ ಹೇಳಿ; ನಗಿಸುತ್ತಿದ್ದಳು !

... ... ... ...

ಆಷಾಡದ ಮಳೆಗೆ ತೂಗಾಡುವ ಬಾಳೆ
ಗೊನೆಯೊಡೆದು ನಿಂತಾಗ,
ಓತ್ತಲಿಗೆ ಹೋದಾಗಲೆಲ್ಲಾ
ಮೈಯೆಲ್ಲ ಮುಳ್ಳು ಹರವಿದಂತೆ
ಎಂಥಹುದೋ ಸೆಳವು !
ಅವ್ವನಲ್ಲಿ ಹೇಳಲಾರದ ಕಳ್ಳ
ಭಾವನೆಗಳು ಮೈ - ಕೊರೆದಾಗ
ಹೊಳೆದಂಡೆಗೆ ಓಡಿ ಜಿಗುಟು ಮಣ್ಣಿನ
ಮೇಲೆ ಕಾಲೂರುತ್ತಿದ್ದೆ
ಆಗೆಲ್ಲ; ಅವ್ವ
ನನ್ನವ್ವ, ನನ್ನ ಸುತ್ತ ಬುದ್ಧಿ ಮಾತುಗಳ
ಬೇಲಿ ಕಟ್ಟುತ್ತಾ ಕೂರುತ್ತಾಳೆ.

... ... ... ...

ಅಂತಂತೆಯೇ - -,
ಜಿಪುಣನ ಮನೆಯ ಮುಂದೆ ಹಸಿದ
ತಿರುಪೆಯವನ ಕೂಗು -
ಅಪ್ಪಳಿಸಿ ನನ್ನ ಉಸಿರು ಕಟ್ಟುತ್ತದೆ
ಹೊಳೆ, ದಂಡೆಯ ಮಾವಿನ ವಗರು
ಹರಿವ ನೀರಿನ ಗುನುಗು
ಜೊತೆಗೂಡಿ - ಮೈ ಮಾಟ ತಿದ್ದಿ
ಚೆಂದದ ಹಣೆಗೆ ಹಚ್ಚೆ ಕೊರೆದಾಗ
ಅವ್ವ, ನನ್ನವ್ವ ;
ನನ್ನ ಸುತ್ತ ಹಸಿರು ತೋರಣ
ಕಟ್ಟುತ್ತಾ ಕೂರುತ್ತಾಳೆ.

ನಿರ್ಮಲ, ಆನವಟ್ಟಿ.

## ಪರ್ಮಿಶನ್ ?!

ಮಹಿಳಾ ಸಂಘಟನೆಯಾದ ಸ್ತ್ರೀ ಶಕ್ತಿ ಸಂಘಟನೆ ಒಮ್ಮೆ ಮಹಿಳೆಯರ ಮೇಲೆ ನಡೆಯುತ್ತಿರುವ ಶೋಷಣೆಯ ವಿರುದ್ಧ ಪ್ರತಿಭಟನಾ ಮೆರವಣಿಗೆ ಏರ್ಪಡಿಸಿತ್ತು. ಸಮಯಕ್ಕೆ ಸರಿಯಾಗಿ ಮಹಿಳೆಯರೆಲ್ಲರೂ ನಿರ್ದಿಷ್ಟ ಪಡಿಸಿದ ಸ್ಥಳದಲ್ಲಿ ಬಂದು ಸೇರತೊಡಗಿದಾಗ, ಸುದ್ದಿ ತಿಳಿದ ಪೋಲಿಸ್ ಅಧಿಕಾರಿಯೊಬ್ಬರು ಆ ಸ್ಥಳಕ್ಕೆ ದೌಡಾಯಿಸಿ, ಮೆರವಣಿಗೆಯನ್ನು ನಡೆಸಲು ಮೊದಲು ಯಾಕೆ ಪರವಾನಗಿ ತೆಗೆದುಕೊಂಡಿಲ್ಲವೆಂದು ಅಧಿಕಾರ ವಾಣಿಯಿಂದ ಕೇಳುತ್ತಲೇ, ಕಾರ್ಯಕರ್ತೆಯೊಬ್ಬರು "ನಾನು ಬೆಳಿಗ್ಗೆ ಐದೂವರೆಗೆ ಎದ್ದು, ಪಾತ್ರೆ ತೊಳೆದು, ಮನೆ ಕಸ ಗುಡಿಸಿ, ಕಾಫಿ ಮಾಡಿ, ತಿಂಡಿ ಮಾಡಿ, ಮಕ್ಕಳಿಗೆ ಸ್ನಾನ ಮಾಡಿಸಿ, ಮಕ್ಕಳಿಗೆ, ಗಂಡನಿಗೆ ಮಧ್ಯಾಹ್ನದ ಊಟವನ್ನು ಡಬ್ಬಿಗಳಿಗೆ ಹಾಕಿ ಕೊಟ್ಟು, ನಾನು ರೆಡಿಯಾಗಿ ಆಫೀಸ್‌ಗೆ ಹೋಗುವ ಹೊತ್ತಿಗೆ ಟೈಮಾಯ್ತು ಎಂದರು. "ಅಲ್ರೀ ನಾನು ಕೇಳ್ತಾ ಇರೋದು ನೀವು ಯಾಕೆ ಪರ್ಮಿಶನ್ ತೆಗೆದುಕೊಂಡಿಲ್ಲ ಅಂತ." ಪುನಃ ಆ ಕಾರ್ಯಕರ್ತೆ, "ನಾನು ಬೆಳಿಗ್ಗೆ ಐದೂವರೆಗೆ ಎದ್ದು ಪಾತ್ರೆ ತೊಳೆದು, ಮನೆ ಕಸಗುಡಿಸಿ, ಕಾಫಿಮಾಡಿ, ತಿಂಡಿ ಮಾಡಿ, ಮಕ್ಕಳಿಗೆ ಸ್ನಾನ ಮಾಡಿಸಿ ಗಂಡನ ಬಟ್ಟೆಗಳನ್ನು ಇಸ್ತ್ರಿ ಮಾಡಿ, ಮಕ್ಕಳಿಗೆ, ಗಂಡನಿಗೆ ಮಧ್ಯಾಹ್ನದ ಊಟವನ್ನು ಡಬ್ಬಗಳಿಗೆ ಹಾಕಿ ಕೊಟ್ಟು, ನಾನು ರೆಡಿಯಾಗಿ ಅಫೀಸ್‌ಗೆ ಹೋಗೊಷ್ಟು ಹೊತ್ತಿಗೆ ಟೈಮಾಯ್ತು ಎಂದರು. ರೀ ನಾನು ಕೇಳ್ತಾ ಇರೋದು.... ಅಂತ ಪೋಲಿಸ್ ಅಧಿಕಾರಿ ಪ್ರಾರಂಭಿಸುತ್ತಲೇ. ಆ ಕಾರ್ಯಕರ್ತೆ, ನಾನು ಬೆಳಿಗ್ಗೆ ಐದೂವರೆಗೆ ಎದ್ದು, ಪಾತ್ರೆ ತೊಳೆದು... ಹೊತ್ತಿಗೆ ಟೈಮಾಯ್ತು ಎಂದರು. ಕ್ಷಣಾರ್ಧದಲ್ಲಿ ಸುಮ್ಮನಾದ ಪೋಲಿಸ್ ಅಧಿಕಾರಿ ವಾಪಸ್ ಹೊರಟು ಹೋದರು.

ಕಾನೂನು ಭಂಗ ಮಾಡುವುದು ಮಹಿಳೆಯರ ಉದ್ದೇಶವಲ್ಲವಾದರೂ ಮನೆಯೊಳಗೆ ಹಾಗೂ ಹೊರಗೆ ದುಡಿಯುವ ಸ್ತ್ರೀಯರ ಮೇಲಿರುವ ಒತ್ತಡವನ್ನು ತಿಳಿಸುವುದೇ ಆಕೆಯ ಉದ್ದೇಶವಾಗಿತ್ತೆಂದು ಹೇಳಬೇಕಾಗಿಲ್ಲವಲ್ಲವೆ ?

## ನೆನಪಾದ ಸಮಾಜವಾದ :

ಸೋಷಲಿಸ್ಟ್ : ಅಂದ ಹಾಗೆ ಇತ್ತೀಚೆಗೆ ನಿಮ್ಮಕ್ಕನನ್ನು ನೋಡಲೇ ಇಲ್ಲ, ಹೇಗಿದ್ದಾರೆ?

ಮಹಿಳೆ : ಹುಷಾರಾಗಿದ್ದಾರೆ ಸಾರ್. ಈಗ ಮಗು ಆಗಿದೆ, ಅದಕ್ಕೆ ಎಲ್ಲೂ ಹೋಗುತ್ತಿಲ್ಲ.

ಸೋಷಲಿಸ್ಟ್ : ಮಗು....! ಅರೆ! ಮದುವೆ ಯಾವಾಗಾಯ್ತು ? ನನಗೆ ಗೊತ್ತೇ ಇಲ್ಲ!

ಮಹಿಳೆ : ಮದುವೇ ಅಂತ ಆಗಲಿಲ್ಲ........ ಅವರಿಬ್ಬರೂ ಬಹಳ ವರ್ಷಗಳಿಂದ ಒಟ್ಟಿಗೆ ಇದ್ದರು.

ಸೋಷಲಿಸ್ಟ್ : ಓಹ್! ಹೌದು ಮರೆತಿದ್ದೆ ನಾವು ಸೋಷಲಿಸ್ಟ್‌ಗಳು, ನಮಗೆ ಅಂತದ್ದರಲ್ಲ ಏನು ನಂಬಿಕೆ!

ಮಹಿಳೆ : ಸಂತೋಷ ಸಾರ್, ಸದ್ಯ ಸೋಷಲಿಸ್ಟ್ ಅಂತ ನೆನಪಿಸಿಕೊಂಡ್ರಲ್ಲ.

## ತಿರುಗುಬಾಣ

ಗಂಡ : ವಾಹ್! ಬೆನಜೀರ್ ಭುಟ್ಟೋ ನೋಡು ಹೇಗೆ?

ಹೆಂಡತಿ : ಯಾಕೆ ? ಏನು ವಿಶೇಷ ?

ಗಂಡ : ಛೆ! ಅಷ್ಟೂ ಗೊತ್ತಿಲ್ವ? ದಿನಾ ಪೇಪರಲ್ಲೆಲ್ಲಾ ಅದೇ ಭುಟ್ಟೋ ಸುದ್ದಿನೇ. ಪತ್ರಿಕೆ ಓದೋ ಅಭ್ಯಾಸ ಇದ್ರೆ ತಾನೆ? ನೀನೇನಿದ್ರೂ ಅಡಿಗೆ ಮನೆಗೆ ಲಾಯಕ್ಕು.

ಮಾರನೇ ದಿನ ಬೆಳಿಗ್ಗೆ ಹೆಂಡತಿ ಆ ದಿನದ ಪತ್ರಿಕೆಯನ್ನು ಓದುತ್ತಾ ಕುಳಿತಿರುತ್ತಾಳೆ.

ಗಂಡ : ಏನು ? ಎಷ್ಟೊತ್ತಾಯ್ತು ಕಾಫಿ ಇಲ್ವ ?

ಹೆಂಡತಿ : ಕ್ಷಮಿಸಿ, ನಾನು ಪೇಪರ್ ಓದ್ಬೇಕು ನನಗೆ ಟೈಮಿಲ್ಲಾ. ನೀವೇ ಕಾಫಿ ಮಾಡಿ ನನಗೂ ಸ್ವಲ್ಪ ಕೊಟ್ಬಿಡಿ.

# ಅಪ್ರತಿಮ ಬಾಲೆಯರು

ಈ ವೀಣೆಯದು ಯಾವಾಗ್ಲೂ ಲೇಟು. ಬಂದೆ ನಡಿಯೋ, ನೀನೊಬ್ಬ ಮುದುಕನ ತರ ಯಾವಾಗಲೂ ಗೊಣಗುತ್ತಿರುತ್ತೀಯಾ. ಸಾಕು, ಸಾಕು, ನಿಮ್ಮ ಜಗಳ, ಪ್ರೇಮಾ ಮನೆ ಬಂತು, ನೀವು ಹೀಗೆ ಕಿತ್ತಾಡುತ್ತಾ ಇದ್ರೆ ಅಜ್ಜಿ ನಮ್ಮನ್ನು ಮನೆಯ ಹತ್ತಿರವೂ ಸೇರಿಸು ವುದಿಲ್ಲ, ಎಂದು ಶೈಲಾ ರೇಗಿದ ಮೇಲೆ ಮಕ್ಕಳೆ ಲ್ಲರೂ ಪ್ರೇಮಾ ಮನೆ ತಲುಪಿದರು ಪ್ರೇಮ ತನ್ನ ಸ್ನೇಹಿತೆ ಯರ ದಾರಿ ಕಾಯುತ್ತಿದ್ದಳು. ಶೈಲಾ "ಎಲ್ಲೆ ನಿಮ್ಮ ಅಜ್ಜಿ" ಎಂದಾಗ, ಪ್ರೇಮಾ "ಇದ್ದಾರೆ ಕಣೆ, ಆದ್ರೆ ಇವತ್ತು ಕಥೆ ಹೇಳುವುದು ತಾತನ ಸರದಿ. ತಾತ ನಿಗೂ ಒಳ್ಳೊಳ್ಳೆಯ ಕತೆಗಳು ಬರುತ್ತವೆ. ಹಾಗಾಗಿ, ಇವತ್ತು ನನ್ನ ಅಜ್ಜಿ ತಾತನನ್ನು ಕತೆ ಹೇಳುವಂತೆ ಒಪ್ಪಿಸಿದ್ದಾರೆ." ಮೂಲೆಯೊಂದರಲ್ಲಿ ನಶ್ಯವನ್ನು ಮೂಗಿ ಗೇರಿಸುತ್ತಾ ಕುಳಿತಿದ್ದ ತಾತ ಮಕ್ಕಳ ಗುಂಪನ್ನು ನೋಡಿ, "ಬನ್ನಿ, ಬನ್ನಿ, ನಿಮಗೆ ಕತೆ ಹೇಳಬೇಕಲ್ಲವೆ? ಯಾವ ಕತೆ ಹೇಳ್ಲಿ" .... ಒಂದು ನಿಮಿಷ ಯೋಚಿಸಿ, "ಹಾಂ ನೆನಪು ಬಂತು." ........

ಒಂದು ಭಯಂಕರವಾದ ಕಾಡಿನ ಮಧ್ಯೆ ಒಂದು ಹಳ್ಳಿ ಇತ್ತು. ಚೂರು ಪಾರು ವ್ಯವಸಾಯ ಮಾಡಿಕೊಂಡು ಆ ಹಳ್ಳಿಯ ಜನರು ಸುಖವಾಗಿದ್ರು. ಆದ್ರೆ ಇದ್ದಕ್ಕಿದ್ದ ಹಾಗೆ, ಆ ಊರಲ್ಲಿ ದುಃಖಕರವಾದ ಘಟನೆ ನಡೆಯಲು ಪ್ರಾರಂಭವಾಯ್ತು. ಚಿಕ್ಕ ಚಿಕ್ಕ ಮುದ್ದು ಮಕ್ಕಳು ಹದಿನೈದು ದಿನಕ್ಕೊಮ್ಮೆ ಮಾಯ ವಾಗುತ್ತಿದ್ದವು. ಪ್ರತಿಯೊಂದು ಮನೆಯ ಜನರು ಭಯದಿಂದ ನಡುಗುತ್ತಿದ್ದರು. ಅಯ್ಯೋ ನಮ್ಮ ಮಗು ಯಾವತ್ತು ಕಳೆದು ಹೋಗತ್ತೋ ಎಂದು ಕೊರಗಿ ಅಳುತ್ತಿದ್ದರು. ಯಾರಿಗೂ ಏನು ಮಾಡುವುದೆಂದು ತೋಚುತ್ತಿರಲಿಲ್ಲ.

ಅದೇ ಊರಿನಲ್ಲಿ ರಾಮಕ್ಕ, ಭೀಮಕ್ಕ ಎಂಬ ಇಬ್ಬರು ಹುಡುಗಿಯರಿದ್ದರು. ಅವರಿಬ್ಬರೂ ಆತ್ಮೀಯ ಸ್ನೇಹಿತೆಯರಾಗಿದ್ದು, ಒಬ್ಬರನ್ನೊಬ್ಬರು ಅಗಲಿರುತ್ತಿರಲಿಲ್ಲ. ಕಾಡಿಗೆ ಸೌದೆ ತರಲು ಹೋಗು ತ್ತಿದ್ದ ಅವರು ತಮ್ಮ ಊರಿನ ಮಕ್ಕಳು ಹೇಗೆ ಕಳು ವಾಗುತ್ತವೆ, ಯಾರು ಕರೆದುಕೊಂಡು ಹೋಗುತ್ತಾರೆ ಎಂದು ಚರ್ಚಿಸುತ್ತಿದ್ದರು. ಪ್ರತಿ ಅಮವಾಸ್ಯೆ ಮತ್ತು ಹುಣ್ಣಿಮೆಯ ದಿನದಂದು ಮಕ್ಕಳು ಕಳುವಾಗುತ್ತಿವೆ ಯಲ್ಲವೆ? ಎಂದು ರಾಮಕ್ಕ ಭೀಮಕ್ಕನಿಗೆ ಹೇಳಿದಳು. ಹೌದು ಕಣೆ, ಹುಣ್ಣಿಮೆ ಇನ್ನೂ ಮೂರು ದಿನ ಮಾತ್ರ ಇದೆ. ಹುಣ್ಣಿಮೆಯ ದಿನ ರಾತ್ರಿ ಹಗಲೂ ಕಾಯೋಣ, ಬೇರೆ ಯಾರಿಗೂ ಈ ವಿಷಯ ತಿಳಿಸುವುದು ಬೇಡ. ತಿಳಿಸಿದರೆ ನಮ್ಮ ಕೆಲಸ ಹಾಳಾಗಿ ಹೋಗುತ್ತೆ ಎಂದಳು ಭೀಮಕ್ಕ. ಹುಣ್ಣಿಮೆಯ ದಿನದಂದು ರಾಮಕ್ಕ ಹಾಗೂ ಭೀಮಕ್ಕ ಇಬ್ಬರೂ ಮನೆಯಲ್ಲಿ, ಆ ದಿನ ಸೌದೆ ತರಲು ತುಂಬಾ ದೂರ ಹೋಗಬೇಕಾಗುತ್ತದೆ, ತಡವಾದರೆ ಕಾಯ ಬೇಡಿ ಎಂದು ಹೇಳಿ ಮನೆಬಿ ಟ್ಟರು. ಅವರಿಬ್ಬರು ವೇಷ ಬದಲಿಸಿಕೊಂಡರು. ಭೀಮಕ್ಕನು ಕಿವಿ ಕೇಳಿಸದ, ಕಣ್ಣು ಕಾಣಿಸದ ಹಣ್ಣು ಹಣ್ಣು ಮುದುಕಿಯ ವೇಷ, ರಾಮಕ್ಕನು ಮುದು ಕಿಯ ಮಗಳು ಹಾಗು ಬಿಕ್ಷುಕಿಯಂತೆ ವೇಷ ಧರಿಸಿ ಊರಿನವರಿಗೆ ಅನುಮಾನ ಬರದ ರೀತಿಯಲ್ಲಿ ಊರನ್ನು ಸುತ್ತತೊಡಗಿದರು. ಹೊತ್ತು ಮುಳುಗುತ್ತಿ ದ್ದರೂ, ಯಾವ ಸುಳಿವೂ ಸಿಗಲಿಲ್ಲ. ಇಬ್ಬರೂ ಊರಿನ ಆಚೆ ಕಾಡು ದಾರಿಯ ಒಂದು ಮರದ ಕೆಳಗೆ ಕುಳಿತು ತಮ್ಮ ಶ್ರಮಕ್ಕೆ ಫಲವಿಲ್ಲವಾಯಿತಲ್ಲ ಎಂದು ಯೋಚಿಸುತ್ತಿರುವಾಗ ಕಾಡಿನೊಳಗಿನಿಂದ ಕುದುರೆ ಬರುವ ಶಬ್ದ ಕೇಳಿಸಿತು. ಆಗ ಇಬ್ಬರೂ ಸದ್ದಿಲ್ಲದೆ ಮರದ ಪೊದೆಯಲ್ಲಿ ಅಡಗಿಕೊಂಡರು. ಕುದುರೆಯು ಅವರು ಅಡಗಿಕೊಂಡಿದ್ದ ಮರದ ಬಳಿಯೇ ಬಂದು ನಿಂತಿತು. ಕುದುರೆಯಿಂದಿಳಿದ ಮುದುಕ ಮುದುಕಿ ಯರಿಬ್ಬರು ಆಯಾಸ ಪರಿಹಾರ ಮಾಡಿಕೊಳ್ಳುತ್ತಾ ಮಾತನಾಡತೊಡಗಿದರು. "ಇಲ್ಲಿಯವರೆಗೆ ನಮ್ಮ ಕೆಲಸ ಯಾವ ತಡೆ ಇಲ್ಲದೆ ನಡೆಯಿತು. ಇನ್ನೂ ಕತ್ತ ಲಾಗುವುದಕ್ಕೆ ಬಹಳ ಸಮಯವಿದೆ. ಸ್ವಲ್ಪ ಮಲಗಿ ನಿದ್ರಿಸೋಣ ಎಂದು ಇಬ್ಬರೂ ಮಲಗಿದರು.

ಇದೇ ಸಮಯಕ್ಕಾಗಿ ಕಾದಿದ್ದ ರಾಮಕ್ಕ, ಮತ್ತು ಭೀಮಕ್ಕ ಸ್ವಲ್ಪವೂ ಸದ್ದಿಲ್ಲದೆ ಕುಳಿತ್ತಿದ್ದ ಕಡೆಯಿಂದ ತೆವಳುತ್ತಾ ಅವರಿಂದ ದೂರ ಹೋಗಿ, ಪಕ್ಷಿಗಳಿಗೂ ಕೇಳಿಸದಂತೆ ಮೆಲ್ಲನೆ ಮಾತನಾಡತೊಡಗಿ ದರು. ರಾಮಕ್ಕ, "ನನಗೆ ಯಾಕೊ ಇವರೇ ಮಕ್ಕ ಳನ್ನು ಕದಿಯುವ ಕಳ್ಳರೆಂದೆನಿಸುತ್ತದೆಯೆಂದಳು. ನನಗೊ ಹಾಗೆ ಎನಿಸಿದೆ ಎಂದಳು ರಾಮಕ್ಕ "ಈಗ ಒಂದು ಉಪಾಯ ಮಾಡೋಣ. ಭೀಮಕ್ಕ, ಇವರು ಊರಿನೊಳಗೆ ಹೊರಡುವಾಗ ದಾರಿಗೆ ಅಡ್ಡ ವಾಗಿ ಕುಳಿತು ಎಲೆ ಅಡಿಕೆಯನ್ನು ಕುಟ್ಟುತ್ತಾ ಕುಳಿ ತಿರು. ಅವರು ಹತ್ತಿರ ಬಂದು, ಏನು ಮಾತನಾಡಿದರೂ

ಕಲ್ಲು ಕಂಬದ ಹಾಗೆ ನಟಿಸು. ಉಳಿದದ್ದನ್ನು ನಾನು ನೋಡಿಕೊಳ್ಳುತ್ತೇನೆ." ಎಂದು ರಾಮಕ್ಕ ಸ್ವಲ್ಪ ದೂರದಲ್ಲಿ ಏನನ್ನೋ ಹುಡುಕುವ ಹಾಗೆ ಮಾಡಿ, ಹೊರೆ ಸೌದೆಯನ್ನು ಸರಿ ಮಾಡತೊಡಗಿದಳು.

ಅಷ್ಟರಲ್ಲಿ ಕುದುರೆ ಏರಿ ಬಂದ ಮುದುಕ ಮುದುಕಿಯು ಅಡ್ಡವಿರುವ ಮುದುಕಿ ವೇಷದ ಭೀಮಕ್ಕನನ್ನು ನೋಡಿ "ಏ ಮುದುಕಿ ಪಕ್ಕಕ್ಕೆ ಸರಿ," ಎಂದು ಕೂಗಿದರು. ಭೀಮಕ್ಕ ಸ್ವಲ್ಪವೂ ಕದಲದೆ ಅಡಿಕೆ ಕುಟ್ಟುವುದನ್ನು ಮುಂದುವರಿಸಿದಳು. ಕೂಗಿ ಕೂಗಿ ಸಾಕಾಗಿ ಕುದುರೆಯಿಂದಿಳಿದು ಬಂದ ಮುದುಕಿ ಭೀಮಕ್ಕನನ್ನು ಬೈಯ್ಯತೊಡಗಿದಳು. ಸೌದೆಯ ಹೊರೆಯನ್ನು ಹೊತ್ತುಕೊಂಡು ಬಂದ ರಾಮಕ್ಕ, "ಅಜ್ಜಿಯನ್ನು ಬೈಯ್ಯಬೇಡಿ. ಅವರಿಗೆ ಕಿವಿ ಕೇಳಿಸುವುದಿಲ್ಲ, ಕಣ್ಣು ಕಾಣಿಸುವುದಿಲ್ಲ. ನಾನು ಅಜ್ಜಿಯನ್ನು ಪಕ್ಕಕ್ಕೆ ಕೂರಿಸುತ್ತೇನೆ ಎಂದು ಹೇಳಿ ಭೀಮಕ್ಕನ ತೋಳು ಹಿಡಿದು ಎಬ್ಬಿಸಿ ಪಕ್ಕಕ್ಕೆ ಕೂರಿಸಿದಳು. ಕುದುರೆಯ ಮೇಲೆ ಕುಳಿತಿದ್ದ ಮುದುಕನು ರಾಮಕ್ಕನಿಗೆ "ಈ ಕಣ್ಣು ಕಾಣಿಸದ, ಕಿವಿ ಕೇಳಿಸದ ಈ ಮುದುಕಿಯನ್ನು ಮನೆಯಲ್ಲಿ ಬಿಟ್ಟು ಬಂದು ನಿನ್ನ ಕೆಲಸ ಮಾಡೋಕೆ ಆಗೋಲ್ವೆ? ಎಂದು ಕೇಳಿದಾಗ ರಾಮಕ್ಕ "ಅಯ್ಯೋ ತಾತ ನಮಗೆ ಮನೆಯೆಲ್ಲಿದೆ? ಅಜ್ಜಿಗೆ ಕಣ್ಣು ಕಿವಿ ಎರಡು ಸರಿ ಇಲ್ಲದಿದ್ದರೂ, ಎಲ್ಲಾ ಕೆಲಸ ಮಾಡ್ತಾಳೆ. ರಾಶಿ ಗಟ್ಲೆ ಹೂ ಕಟ್ಟುತ್ತಾಳೆ, ಮನೆ ಸಾರಿಸಿ, ಬಟ್ಟೆ ಒಗಿಯುತ್ತಾಳೆ, ಖಾರ ಅರೆಯುತ್ತಾಳೆ. ನಾನು ಕಾಡು ಹೂಗಳನ್ನು ಕೊಯ್ದು ಕೊಟ್ಟರೆ ಅವಳು ಹೂವನ್ನು ಕಟ್ಟುವಳು. ನಾನು ಕಾಡಿನೊಳಗೆ ಒಟೆದ ಸೌದೆಯನ್ನು, ಹೂವನ್ನು ಊರಿನೊಳಗೆ ಮಾರಿ, ನಾವಿಬ್ಬರೂ ಹೊಟ್ಟೆ ಹೊರೆದುಕೊಳ್ಳಬೇಕು ಎಂದು ದುಃಖದಿಂದ ನುಡಿದಳು. ಆಗ ಮುದುಕನು, ಮುದುಕಿಯನ್ನು ಕರೆದು, "ನೋಡು ನಾವು ಪುನಃ ಹಿಂದಿರುಗಿ ಬರುವವರೆಗೂ ನಮ್ಮ ಕುದುರೆಯನ್ನು ನೋಡಿಕೊಡಿರಲಿ ನಾವು ಕೆಲಸ ಮುಗಿಸಿ ಬಂದಮೇಲೆ ಇವರನ್ನು ನಮ್ಮ ಜೊತೆಗೆ ಕರೆದುಕೊಂಡು ಹೋಗೋಣ, ನಮ್ಮ ದೇವಿ ಪೂಜೆಗೆ ಹೂವನ್ನು ಕಟ್ಟಿ, ಶರಾಬು ಹಾಗು ಕಾರ ಅರೆಯಲು ಮುದುಕಿ, ಇನ್ನು ಆ ಹುಡುಗಿ ಕಾಡಿನಿಂದ ಸೌದೆ ತಂದು ಅಡಿಗೆ ಮಾಡಲು ಸಹಾಯವಾಗಬಹುದು," ಎಂದ. ಆಗ ಮುದುಕಿಯು ಸಹ ಯೋಚಿಸಿ, ಹಾಗೇ ಆಗ್ಲಿ ಎಂದು ರಾಮಕ್ಕನನ್ನು ಕರೆದು "ನೀವು ನಮ್ಮ ಜೊತೆಗೆ ಬಂದ್ರೆ, ಒಳ್ಳೆ ಮನೆ, ಒಳ್ಳೆ ಊಟ ಕೊಡ್ತಿವಿ ಬರ್‍ತೀರಾ, ಎಂದು ಕೇಳಿದಳು. ರಾಮಕ್ಕ ಯೋಚಿಸಿದಂತೆ ನಟಿಸಿ, ಸರಿ ಎಂದಳು. ಆಯ್ತು, ನಮಗೆ ಊರೊಳಗೆ ಸ್ವಲ್ಪ ಕೆಲಸವಿದೆ, ನಾವು ಬರುವವರೆಗೆ ಕುದುರೆಯನ್ನು ನೋಡಿಕೊಂಡಿರಿ, ಎರಡು ತಾಸಿನೊಳಗೆ ಬರುತ್ತೇವೆಂದು ಹೇಳಿ ಹೊರಟು ಹೋದರು. ಅವರು ಬಹುದೂರ ಹೋದ ಮೇಲೆ ರಾಮಕ್ಕ "ಈಗ ಸಮಯವಿಲ್ಲ, ಬೇಗ ಓಡು, ಅವರನ್ನು ಹಿಂಬಾಲಿಸಿ ಏನುಮಾಡುತ್ತಾರೆ ನೋಡೋಣ" ಎಂದು ಓಡತೊಡಗಿದರು. ಅವರು ಕಣ್ಣಿಗೆ ಕಂಡ ಕೂಡಲೆ, ಅವರನ್ನು ಹಿಂಬಾಲಿಸತೊಡಗಿದರು. ಮುದುಕ ಹಾಗು ಮುದುಕಿ ಮಲು ದನಿಯಲ್ಲಿ ಮಾತನಾಡುವುದು ಕೇಳಿಸತೊಡಗಿತು. ಮುದುಕಿ "ಏನೂ ಮರೆತಿಲ್ಲ ತಾನೆ"? ಮುದುಕ "ಎಲ್ಲಾದರೂ ಉಂಟೆ? ಇನ್ನೂ ಐದು ಬಲಿ ಕೊಟ್ಟರೆ ನಮ್ಮ ಇಷ್ಟಾರ್ಥವೆಲ್ಲಾ ಸಿದ್ಧಿಯಾಗುತ್ತದೆ. ಈಗ ಶಿಶುಬಲಿ ನಂತರ ನರಬಲಿ, ನರಬಲಿಗೆ ಈಗಾಗ್ಲೆ ಇಬ್ಬರನ್ನು ಸಿದ್ಧಮಾಡಿದ್ದೇನೆ. ಮುದುಕಿ, "ಯಾರು ಅವರು.?" ಮುದುಕ "ಇನ್ಯಾರು ಆ ಮುದುಕಿ ಹಾಗು ಆ ಹುಡುಗಿ," ಎಂದು ಜೋರಾಗಿ ನಗತೊಡಗಿದ. ಅವರನ್ನು ಹಿಂಬಾಲಿಸುತ್ತಿದ್ದ ರಾಮಕ್ಕ, ಭೀಮಕ್ಕರಿಗೆ ಮೈ ಜುಮ್ ಎಂದಿತು ಒಂದುಕ್ಷಣ. ಇಬ್ಬರು ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. "ಇಲ್ಲಿ ನಡೆ, ನೋಡೋಣ" ಎಂದು ಕಣ್ಣಸನ್ನೆಯಲ್ಲಿಯೇ ಮಾತನಾಡಿಕೊಂಡು ಅವರನ್ನು ಅನುಸರಿಸತೊಡಗಿದರು.

ಇನ್ನೇನು ಊರು ಸಮೀಪಿಸಿತು. ಹುಣ್ಣಿಮೆಯ ಬೆಳಕು ರಾಮಕ್ಕ ಭೀಮಕ್ಕರಿಗೆ ಸಹಾಯ ಮಾಡುವಂತಿತ್ತು. ಊರಿನ ಜನರು ಹೊಲಗದ್ದೆಗಳಲ್ಲಿ ದುಡಿದು ಸಾಕಾಗಿ ನಿದ್ರಿಸುತ್ತಿದ್ದರು. ಆಗ ಮುದುಕನು ನರಿಯ ಹಾಗೆ ಊಳಿಡುತ್ತಿದ್ದಾಗ, ಅಜ್ಜಿಯು ಒಂದು ಮನೆಯ ಮುಂದೆ ಬಂದಳು ನರಿಯ ದನಿಯನ್ನು ಕೇಳಿದ ನಾಯಿಗಳು, ದನಿ ಬಂದ ಕಡೆಗೆ ಬಂದು ಒಂದೇ ಸಮನೆ ಬೊಗಳತೊಡಗಿದವು. ಆಗ ಮುದುಕಿಯು ತನ್ನ ಚೀಲದಿಂದ ಒಂದು ಪುಡಿಯನ್ನು ತೆಗೆದು ಮನೆಯ ಮುಂದೆ ಚೆಲ್ಲಿದಳು. ಅಲ್ಲಿ ಓಡಿದ ನಾಯಿಯೊಂದು ಆ ಪುಡಿಯನ್ನು ಮೂಸಿ ಅಲ್ಲಿಯೇ ಬಿದ್ದು ಹೋಯಿತು, ನಾಯಿಗಳ ಸದ್ದು ಕೇಳಿದ ಮನೆಯ ಯಜಮಾನ ಮನೆಯ ಹೊರಗೆ ಬರುತ್ತಲೇ

ಬಿದ್ದು ಹೋದ. ಆ ಮುದುಕಿಯು ಮನೆಯೊಳಗೋಡಿ ಒಂದು ಮಗುವನ್ನು ಎತ್ತಿಕೊಂಡು ಬರುವುದು ಕಾಣಿಸಿತು. ರಾಮಕ್ಕ, ಭೀಮಕ್ಕ ಇಬ್ಬರೂ ಹಿಂತಿರುಗಿ ಓಡತೊಡಗಿದರು. ಮುದುಕರು ಬರುವುದರೊಳಗೆ ಕುದುರೆಯನ್ನು ಸಮೀಪಿಸಿ ನಿದ್ದೆಹೋದವರಂತೆ ಮಲಗಿಬಿಟ್ಟರು. ಹತ್ತಿರಕ್ಕೆ ಬಂದ ಮುದುಕ ಮುದುಕಿ ರಾಮಕ್ಕನನ್ನು ಎಬ್ಬಿಸಿ ಮಗುವನ್ನು ಅವಳ ಕೈಗೆ ಕೊಟ್ಟು, "ನಿಮ್ಮ ಅಜ್ಜಿಯನ್ನು ಕರೆದುಕೊಂಡು ಬೇಗ ಬೇಗ ನಡೆ. ನಾವು ನಿಮ್ಮ ಹಿಂದೆ ಬರುತ್ತೇವೆ" ಎಂದರು. ಮಗುವನ್ನು ನೋಡಿದ ರಾಮಕ್ಕ, ಇದನ್ನು ಹೇಗೆ ಉಳಿಸುವುದು ಎಂದು ಯೋಚಿಸುತ್ತಾ ಅದರ ಮೈದಡವಿದಳು. ಅವಳ ಕಣ್ಣಿಂದ ಕಣ್ಣೀರಿನ ಹನಿಗಳು ಉದುರತೊಡಗಿದವು. ಸಂಶಯ ಬರದಂತೆ ಕಣ್ಣೀರನ್ನು ಒರೆಸಿಕೊಂಡಳು. ರಾಮಕ್ಕ ಭೀಮಕ್ಕ ಮಾತನಾಡದೆ ಮೌನದಿಂದ ಹೆಜ್ಜೆ ಹಾಕತೊಡಗಿದರು. ಕಾಡು ದಟ್ಟವಾಗುತ್ತಾಹೋಯಿತು. ದಾರಿಯ ಗುರುತಿಗಿರಲಿ, ಎಂದು ರಾಮಕ್ಕ ಅವಳ ಕತ್ತಿನಲ್ಲಿದ್ದ ಮಣಿಸರವನ್ನು ಕಿತ್ತು ಹೆಜ್ಜೆಗೊಂದರಂತೆ ಹಾಕುತ್ತಾ ಹೋದಳು. ಒಂದು ದೊಡ್ಡ ಬಂಡೆ ಎದುರಾದೊಡನೆ, ಅದರ ಮುಂದೆ ನಿಂತ ಮುದುಕರು ಇಲ್ಲೇ ನಮ್ಮ ಮನೆ ಇರಿ ಎಂದರು. ಮಗುವನ್ನು ಹಾಗೂ ಭೀಮಕ್ಕನನ್ನು ಒಂದು ಕೈಯಲ್ಲಿ ಹಿಡಿದುಕೊಂಡು ಬಂದ ರಾಮಕ್ಕನಿಗೆ ಕೈಕಾಲುಗಳು ನೋಯ ತೊಡಗಿದವು. ಬಂಡೆಯನ್ನು ಪಕ್ಕಕ್ಕೆ ಸರಿಸಿದ ಮುದುಕರು. ಅವರನ್ನು ಒಳಗೆ ಕರೆದು ಮುದುಕಿಗೆ ಹೇಳಿದ, "ಈ ಹುಡುಗಿಯನ್ನು ಹಾಗು ಮುದುಕಿಯನ್ನು ದೇವಿಯ ಕೋಣೆಗೆ ಬಿಡಬೇಡ" ಎಂದ. ಮಗುವನ್ನು ರಾಮಕ್ಕನ ಕೈಯಿದ ತೆಗೆದುಕೊಂಡ ಮುದುಕಿ, ಕೋಳಿ

## ಃ ಬೀದರ್‌ನ ಮಹಿಳೆಯರು ಃ

ಬೀದರ್ ಘಟನೆಯ ಕುರಿತು ಹಲವಾರು ವರದಿಗಳು, ಅಧ್ಯಯನಗಳ ಈಗಾಗಲೇ ಪ್ರಕಟಗೊಂಡಿವೆ. ಜನವರಿ 1, 1989 ರಂದು "ಕಲಾವಿದ ಹಾಗೂ ಲೇಖಿಕರ" ಬಳಗದಿಂದ ಈ ಘಟನೆಯ ಪ್ರತ್ಯಕ್ಷ ವರದಿ ಹಾಗೂ ಅಭಿಪ್ರಾಯಗಳನ್ನು ಕೇಳಲು ಪತ್ರಿಕೋದ್ಯಮಿಗಳು ಸೇರಿದಂತೆ ಹಲವರನ್ನು ಬೀದರ್‌ನಿಂದ ಆಹ್ವಾನಿಸಲಾಗಿತ್ತು. ಸಮಾಜ ಸುಧಾರಕಿ ಲಕ್ಷ್ಮೀದೇವಿಯವರೂ ಸಹ ಇದರಲ್ಲಿ ಭಾಗವಹಿಸಿ ಮಹಿಳೆಯರ ಮೇಲೆ ನಡೆದ ದೌರ್ಜನ್ಯವನ್ನು ನೋವಿನಿಂದ ಮಾತನಾಡಿದರು. ಸಿಖ್‌ರ ಕೊಲೆ ತಪ್ಪು ಎಂದು ನಾವು ಹೃದಯದಾಳದಿಂದ ನುಡಿಯುವಾಗಲೂ, ಏಕೆ ಹೀಗೆ. ಕಮ್ಯುನಲಿಸಂನ ಗಲಾಟೆಗಳಲ್ಲಿ ಮಹಿಳೆಯರ ಮೇಲೆ ದೈಹಿಕ ಆಕ್ರಮಣ, ಅವರ ಬಗ್ಗೆ ಅಶ್ಲೀಲವಾಗಿ ನಡವಳಿಕೆಗಳು ಕಂಡುಬರುತ್ತವೆ ಎಂಬುದನ್ನು ಆಳವಾಗಿ ಯೋಚಿಸಬೇಕಾಗುತ್ತದೆ. ಆ ಬಗ್ಗೆ ಮಾನಾಡುತ್ತಾ ಲಕ್ಷ್ಮೀದೇವಿಯವರು ನಮ್ಮ ಮೇಲೆ ಅಂದರೆ ಮಹಿಳೆಯರ ಮೇಲೆ ನಡೆಯುವ ದೌರ್ಜನ್ಯವನ್ನು ನಾವೇ ಪ್ರತಿಭಟಿಸಬೇಕೇ ಹೊರತು ಸರ್ಕಾರವಾಗಲೀ, ರಾಜಕಾರಣಿಯಾಗಲೀ, ಧರ್ಮಗುರುವಾಗಲೀ ಇದಕ್ಕೆ ಏನೂ ಮಾಡುತ್ತಿಲ್ಲ, ಹಾಗೂ ಮಾಡಲಾರರು ಎಂದು ಅಭಿಪ್ರಾಯಪಟ್ಟರು. ಹಾಗಾಗಿಯೇ ಬೀದರ್‌ನಲ್ಲಿ ಸಿಖ್ ವಿದ್ಯಾರ್ಥಿಗಳಿಂದ ಮಹಿಳೆಯರ ಮೇಲೆ ಈ ರೀತಿಯ ದೌರ್ಜನ್ಯಗಳು (ಅತ್ಯಾಚಾರ, ಕಕ್ಕಸ್ಸಿಗೆ ಕುಳಿತಾಗ ಫೋಟೋ ತೆಗೆಯುವುದು, ದಾರಿಗಳಲ್ಲಿ ಮಿತಿ ಮೀರಿ ಚುಡಾಯಿಸುವುದು ಇತ್ಯಾದಿ) ನಡೆದಾಗ ಬೀದರ್‌ನ ಜನ ಪ್ರತಿಭಟಿಸಬೇಕಾಗಿದ್ದು ಅನಿವಾರ್ಯವಾಗಿತ್ತು ಎಂದರು. ಹೆಣ್ಣಿನ ಉಡಿಯಲ್ಲಿ, ಮಡಿಲಲ್ಲಿ ಬೆಳೆದು ಬರುವ ಗಂಡೇ ಹೀಗೆ ಹೆಣ್ಣಿನ ಮುಖಕ್ಕೆ ಪರಧೆ ಹಾಕಿ ದಂಡಿಸುವುದು ಸರಿಯೇ ಎಂದರು. ವಿಧಾನ ಸೌಧ, ಸರ್ಕಾರ ಮುಂತಾದವುಗಳನ್ನು ಇಲ್ಲೇ ಕಾಣುತ್ತಿರುವ ನೀವು ಬೆಂಗಳೂರಿನ ಜನಕ್ಕೆ ನಮಗಾದ ಅನ್ಯಾಯ, ಅವಮಾನಗಳನ್ನು ಹೇಗೆ ಸಾಕ್ಷ್ಯಾಧಾರ ತೋರಿಸಬೇಕು,? ಅಥವಾ ಪೋಲಿಸ್ ಸ್ಟೇಷನ್‌ನಲ್ಲಿ ಬಟ್ಟೆ ಬಿಚ್ಚಿ ಹೇಗೆ ತೋರಿಸಬೇಕು? ಎಂದು ಸರ್ಕಾರ, ರಾಜಕಾರಣಿ, ಬುದ್ಧಿ ಜೀವಿಗಳು ಹಾಗೂ ಪೋಲಿಸರನ್ನು ತರಾಟೆಗೆ ತೆಗೆದುಕೊಂಡರು. ಈ ರೀತಿಯ ಘಟನೆಗಳು ವಿಕೋಪಕ್ಕೆ ಹೋಗುವ ಮೊದಲು ಇವರೆಲ್ಲ ಎಚ್ಚೆತ್ತುಕೊಳ್ಳಬೇಕು ಎಂದು ಸಲಹೆಯನ್ನಿತ್ತಿರು.

ಯನ್ನು ಕೊಯ್ದು ಅಡಿಗೆ ಮಾಡಲು ಹುಡುಗಿಗೆ ಹೇಳಿ ಮುದುಕ ಇನ್ನೊಂದು ಕೋಣೆಗೆ ಹೊರಟು ಹೋದ.

ಮುದುಕಿಯು ಇವರಿಗೆ ಬೇಕಾದ ಸಾಮಾನುಗಳನ್ನು ಕೊಟ್ಟು ಬೇಗ ಅಡಿಗೆ ತಯಾರಿಸಲು ಹೇಳಿ, ಕಾರ ಅರೆದಾದ ಮೇಲೆ, ಶರಾಬು ತಯಾರಿಸಲು ಬೇಕಾದ ಸಾಮಾನುಗಳನ್ನು ಕೊಟ್ಟು ನುಣ್ಣಗೆ ಅರೆದು ಮಾಡಬೇಕೆಂದು ಹೇಳಿ, ಅಫೀಮನ್ನು ಮಾತ್ರ ಸ್ವಲ್ಪವೇ ಹಾಕಬೇಕೆಂದು ಹೇಳಿದಳು. "ಇದನ್ನೆಲ್ಲಾ ಕೇಳಿಸಿ ಕೊಳ್ಳುತ್ತಿದ್ದ ಭೀಮಕ್ಕನಿಗೆ ಮುದುಕರನ್ನು ವಂಚಿಸಲು ಬೆಳಕು ಕಂಡಂತಾಯ್ತು. ಮುದುಕಿ ಹೊರಟು ಹೋದ ಮೇಲೆ ಇಬ್ಬರೂ ಮಾತಿಲ್ಲದೆ ಕೆಲಸದಲ್ಲಿ ತೊಡಗಿದರು. ರಾಮಕ್ಕನು ಕೋಳಿ ಸಾರನ್ನು ಬಹುರುಚಿಯಾಗಿ ಮಾಡಿಟ್ಟರೆ ಭೀಮಕ್ಕನು ಶರಾಬನ್ನು ತಯಾರಿಸಲು ಬೇಕಾದ ಸಾಮಾಮಗಳನ್ನು ನುಣ್ಣಗೆ ರುಬ್ಬಿಟ್ಟಳು. ಮರೆತು ಸಹ ಇಬ್ಬರೂ ಮಾತಾನಾಡುವುದಾಗಲಿ, ನೋಡುವುದಾಗಲೀ ಮಾಡಲಿಲ್ಲ: ಇದನ್ನು ಮರೆಯಲ್ಲೆ ನೋಡುತ್ತಿದ್ದ ಮುದುಕರು ಭೀಮಕ್ಕನನ್ನು ನಿಜವಾದ ಕುರುಡಿ, ಕಿವುಡಿಯೆಂದು ನಂಬಿ ಊಟಕ್ಕೆ ಬಂದರು. ಶರಾಬನ್ನು ಕುಡಿಯುತ್ತಾ, ಅದರ ರುಚಿಯನ್ನು ಹೊಗಳುತ್ತಾ ಊಟಮಾಡಿದರು. ಹೆಚ್ಚಾಗಿ ಕುಡಿದು ತಿಂದು ಅಲ್ಲಿಯೇ ಬಿದ್ದುಕೊಂಡಿದ್ದರು. ಅವರು ಹಾಗೆ ಎಚ್ಚರ ತಪ್ಪಿ ಬಿದ್ದುಕೊಂಡಿದ್ದು ನಟನೆಗಾಗಿ ಎಂದು ರಾಮಕ್ಕ ಭೀಮಕ್ಕನಿಗೆ ಗೊತ್ತಿದ್ದರಿಂದ ಅವರು ಮಾತನಾಡಲಿಲ್ಲ.

ಬೆಳಿಗ್ಗೆ ಎದ್ದು ರಾಮಕ್ಕನನ್ನು ಹೂ ಮತ್ತು ಸೌದೆ ತರಲು ಹೇಳಿ ಭೀಮಕ್ಕನನ್ನು ದೇವಿಯ ಮನೆಯನ್ನು ಶುಚಿಗೊಳಿಸಲು ಹೇಳಿದರು. ಕೋಣೆಯನ್ನು ಪ್ರವೇಶಿಸಿದ ಭೀಮಕ್ಕನಿಗೆ ಕೋಣೆಯಮ್ನ ನೋಡಿ ಚಿಟ್ಟನೆ ಚೀರಬೇಕೆನಿಸಿತು, ಮೈ ತರತರನೆ ನಡುಗುತ್ತಿತ್ತು. ಹೊಟ್ಟೆಯವರೆಗೂ ಚಾಚಿದ್ದ ನಾಲಿಗೆ ತುಟಿಯ ಕೊನೆಗಳಿಂದ ಹೊರಬಂದಿದ್ದ ಕೋರೆ ಹಲ್ಲುಗಳು, ಜುಟ್ಟು ಕೆದರಿದ, ಹನ್ನೆರಡು ಮಕ್ಕಳ ರುಂಡವನ್ನು ಧರಿಸಿದ್ದ ವಿಕೃತ ಆಕಾರ ಅದರ ಕಾಲಿನ ಬುಡದಲ್ಲಿ ನಿನ್ನೆ ಬಲಿಕೊಡಲು ತಂದ ಕಂದಮ್ಮ, ಕೈಕಾಲು ಬಡಿಯುತ್ತ ಆ ವಿಕೃತ ಆಕಾರವನ್ನೇ ನೋಡುತ್ತಾ ನಗುತ್ತಾ ಮಲಗಿದೆ. ನಾನು ಕುರಡಿ ಎಂದು ನಂಬಿ ಈ ಕೋಣೆಗೆ ಬಿಟ್ಟಿದ್ದಾರೆ. ಈ ದಿನ ಕಳೆದರೆ ಕಂದಮ್ಮನ ಕತೆ ಮುಗಿದಂತೆಯೇ. ಈ ಘೋರ ಕೃತ್ಯವನ್ನು ಹೇಗೆ ಸಹಿಸುವುದು. ಅದಕ್ಕೆ ಪರಿಹಾರವೆಂದರೆ ಮುದುಕರನ್ನು ಇಂದೇ ವಿಚಾರಿಸಿಕೊಳುವುದೆಂದು ತೀರ್ಮಾನಿಸಿಕೊಂಡಳು. ಯಾರೋ ಬರುವ ಸಪ್ಪಳ ಕೇಳಿ ಏನೂ ಅರಿಯದಂತೆ ಎರಡು ಕೈಗಳನ್ನು ತಡರುತ್ತಾ ನಿಂತಳು. ಒಳಗೆ ಬಂದ ಮುದುಕಿ ಇವಳ ಕೈಗೆ ಹೂವನ್ನು ಕೊಟ್ಟು ಕಟ್ಟಲು ಹೇಳಿದಳು. ಪಕ್ಕದ ಕೋಣೆಯಲ್ಲಿ ಯಾವುದೋ ಪುಸ್ತಕವನ್ನು ನೋಡುತ್ತಿದ್ದ ಮುದುಕನು "ಸೌದೆ ತರಲು ಹೋದ ಹುಡುಗಿ ಬಂದ ಹಾಗಿದೆ, ಬೇಗೆ ಅಡಿಗೆ ಮಾಡಲು ಹೇಳು. ಮುಂಜಾನೆ ಬೇಗ ಎದ್ದು ಕಾರ್ಯ ಪ್ರಾರಂಭಿಸಬೇಕು ನಿನ್ನೆಯ ಹಾಗೆ ಶರಾಬನ್ನು ಮಾಡಿಸು" ಎಂದು ಹೇಳಿ ಅವನ ಕೆಲಸದಲ್ಲಿ ಮಗ್ನನಾದ. ಮುದುಕಿ ಭೀಮಕ್ಕನ ಕೈ ಹಿಡಿದು ಅಡುಗೆ ಮನೆಗೆ ಬಂದಳು. ಅಷ್ಟರಲ್ಲಿ ಬಂದ ರಾಮಕ್ಕನಿಗೆ ಮುದುಕನು ಹೇಳಿದ ಕೆಲಸಗಳನ್ನು ಮಾಡಲು ಹೇಳಿ ದೇವಿ ಕೋಣೆಗೆ ನಡೆದುಬಿಟ್ಟಳು. ಭೀಮಕ್ಕನಿಗೆ ಕಾರ ರುಬ್ಬಲು ಅಣಿಮಾಡಿ. ಕೊಟ್ಟ ರಾಮಕ್ಕ ಶರಾಬನ್ನು ತಯಾರಿಸಲು ಅಣಿಮಾಡತೊಗಿದಳು, ಅಫೀಮನ್ನು ಹಾಕುವಾಗ ಭೀಮಕ್ಕ ಕೈ ಸನ್ನೆ ಮಾಡಿ ಅಷ್ಟನ್ನೂ ಹಾಕಿಬಿಡಲು ಹೇಳಿದಳು. ಕಾರವನ್ನು ಅರೆದಾದ ಮೇಲೆ ಶರಾಬನ್ನು ನುಣ್ಣಗೆ ಅರೆಯತೊಡಗಿದಳು. ಮಧ್ಯಾಹ್ನ ಊಟ ಮಾಡಿರದ ಮುದುಕ ಊಟಕ್ಕೆ ಅವಸರಿಸಿದ ಆಗ ರಾಮಕ್ಕ ಅಡಿಗೆ ಏನೊ ಆಗಿದೆ ಆದ್ರೆ ಅಮ್ಮ ಇನ್ನು ಶರಾಬನ್ನು ಅರೆಯುತ್ತಲೇ ಇದಾಳೆ ಎಂದಳು. ಆಗಿರುವುದನ್ನೆ ತೆಗೆದು ಕೊಂಡು ಬರುವಂತೆ ಮುದುಕ ಗರ್ಜಿಸಿದ. ರಾಮಕ್ಕ ಬೇಗ ಬೇಗ ಎರಡು ಪಾತ್ರೆಗಳಲ್ಲಿ, ಶೋಧಿಸಿ ಮಾಂಸವನ್ನು ಶರಾಬನ್ನು ಒಟ್ಟಿಗೆ ಕೊಟ್ಟಳು. ಹೊಟ್ಟೆ ತುಂಬಾ ಹಸಿದಿದ್ದ ಇಬ್ಬರು ಮಾಂಸದ ಘಮಘಮ ಪರಿಮಳಕ್ಕೆ ಒಂದೇ ಗುಟುಕಿಗೆ ಶರಾಬನ್ನು ಕುಡಿದು ಮಾಂಸವನ್ನು ತಿನ್ನಹತ್ತಿದರು. ಕ್ಷಣಾರ್ಧದಲ್ಲಿ ಇಬ್ಬರು ಪ್ರಜ್ಞೆ ತಪ್ಪಿ ಬಿದ್ದರು. ಹರುಷದಿಂದ ಕುಣಿದಾಡಿದ ಭೀಮಕ್ಕನ್ನು ದಪ್ಪ ದಪ್ಪ ಸೌದೆಗಳನ್ನು ಉರಿಯುತ್ತಿದ್ದ ಒಲೆಗೆ ಹಾಕಿ ರಾಮಕ್ಕನನ್ನು ದೇವಿ ಕೋಣೆಗೆ ಕರೆದು ಕೊಂಡು ಹೋದಳು. ಅಲ್ಲಿಯ ದೃಶ್ಯವನ್ನು ನೋಡಿ ರಾಮಕ್ಕ ಕಣ್ಣು ಮುಚ್ಚಿದಮ್ಮಯ್ಯ, ನಾವು ಇಲ್ಲಿಂದ ಹೊದ್ಲು ತಪ್ಪಿಸಿ ಕೋಳ್ಳೋಣ ಎಂದು ಪಿಸುಗುಟ್ಟಿದಳು. ಹುಚ್ಚಿ. ಇಷ್ಟು

ಕಷ್ಟ ಪಟ್ಟು ಇಲ್ಲಿಯವರೆಗೆ ಬಂದಿರುವುದು ವ್ಯರ್ಥವಾಗುವುದಿಲ್ಲವೇ, ನೋಡು. ಮುಗ್ಧ ಕಂದ ದೇವಿಯ ಪಾದದ ಬಳಿ ಹೇಗೆ ನಿದ್ರಿಸುತ್ತಿದೆ. ಬಾ ಆಮುದುಕರನ್ನು ವಿಚಾರಿಸಿ ಕೊಳ್ಳೋಣ, ನಾನು ಅವರಿಗೆ ಕೊಟ್ಟಿರುವ ಶರಾಬು ಇನ್ನು ಎರಡು ದಿನ ಕದಲುವುದಿಲ್ಲ. ಎಂದು ಮುದುಕರು ಬಿದ್ದಿದ್ದ ಕಡೆಗೆ ಬಂದರು ಅಷ್ಟರಲ್ಲಿ ಸೌದೆ ಕಾದು ಕೆಂಡವಾಗಿದ್ದವು "ರಾಮಕ್ಕ ಈಗ ಅವರು ಪ್ರಜ್ಞೆ ತಪ್ಪಿದ್ದಾರೆ ಉರಿಯುವ ಕೆಂಡಗಳನ್ನು ಅವರ ಕಣ್ಣುಗಳ ಮೇಲಿಡೋಣ ಎಂದು ಸೂಚಿಸಿ ನಿಗಿ ನಿಗಿ ಉರಿಯುತ್ತಿದ್ದ ಕೆಂಡಗಳನ್ನು ತೆಗೆದು ಅವರ ಕಣ್ಣುಗಳ ಮೇಲಿಟ್ಟರು. ಆಗ ಸ್ವಲ್ಪ ಕದಲಾಡಿದ ಮುದುಕರು ಮತ್ತೆ ಸದ್ದಿಲ್ಲದೆ ಬಿದ್ದುಕೊಂಡರು. "ಭೀಮಕ್ಕ ನೀನು ಒಳ್ಳೆ ಉಪಾಯ ಮಾಡಿದೆ ಈಗ ಕತ್ತಲಾಯಿತು. ಊರಿಗೆ ಹೋಗಲು ಸಾಧ್ಯವಿಲ್ಲ." ಎಂದು ಹೇಳಿದಳು. ಮಗುವನ್ನೆತ್ತಿ ತೊಡೆಯ ಮೇಲೆ ಮಲಗಿಸಿ ಕೊಂಡು ಮುದ್ದಾಡಿ ಮಗುವನ್ನು ರಕ್ಷಿಸಿದ ಸಂತೋಷವನ್ನು ಸವಿಯುತ್ತಾ ರಾತ್ರಿ ಕಳೆದರು. ಸೂರ್ಯನ ಬೆಳಕು ಕಂಡಕೂಡಲೇ ಭೀಮಕ್ಕ ಮಗುವನ್ನು ಹೆಗಲ ಮೇಲೆ ಹಾಕಿಕೊಂಡಳು. ರಾಮಕ್ಕ ತಾನು ಹಾಕಿದ್ದ ಮಣಿಗಳನ್ನು ಆರಿಸುತ್ತಾ ಊರದಾರಿ ಹಿಡಿದರು.

ಊರಿನ ಜನರಿಗೆ ಸುದ್ದಿ ತಿಳಿಸಿದ ರಾಮಕ್ಕ, ಭೀಮಕ್ಕ ಊರಿನ ಜನರನ್ನು ಕರೆದುಕೊಂಡು ಪುನಃ ಕಾಡಿಗೆ ಹೋದರು. ಇನ್ನೂ ಪ್ರಜ್ಞೆ ತಪ್ಪಿ ಬಿದ್ದಿದ್ದ ಮುದುಕರಿಗೆ ಎಚ್ಚರವಾಗುವವರೆಗೆ ಕಾದಿದ್ದ ಜನರು ಅವರನ್ನು ಊರಿಗೆ ಎಳೆದುಕೊಂಡು ಬಂದು ಅವರ ತಲೆಯನ್ನು ಬೋಳಿಸಿ, ಕತ್ತೆಯ ಮೇಲೆ ಕೂಡಿಸಿ ಮೆರವಣಿಗೆ ಮಾಡಿ. ದೊಡ್ಡ ಹಾಳು ಬಾವಿಗೆ ನೂಕಿ, ಕಲ್ಲುಗಳನ್ನು ಎಸೆದು ಕೊಂದು ಬಿಟ್ಟರು. ಇದ್ದರೆ ಇಂಥ ಮಕ್ಕಳಿರಬೇಕು ಎಂದು, ರಾಮಕ್ಕ ಭೀಮಕ್ಕರ ಧೈರ್ಯ ಬುದ್ಧಿವಂತಿಕೆಗಳನ್ನು ಊರ ಜನರು ಹಾಡಿ ಹೊಗಳಿದರು. ಅವರ ತಂದೆ ತಾಯಿಗಳ ಹರ್ಷ ಹೇಳತೀರದು. "ಅಬ್ಬ, ಈ ಕತೆ ಕೇಳ್ತಾ ಇದ್ರೆ, ನಾವೇ ರಾಮಕ್ಕ ಭೀಮಕ್ಕ ಎಂದೆನಿಸುತ್ತದೆ," ಎಂದು ಮಾತನಾಡಿಕೊಂಡದ್ದನ್ನು ಕೇಳಿಸಿಕೊಂಡ ತಾತ, "ಹೌದು ಮಕ್ಕಳೇ, ನಿಮಗೂ ಧೈರ್ಯ ಸಾಹಸವಿದೆ. ಅವನ್ನು ಕಾಲಕ್ಕೆ ತಕ್ಕಂತೆ ಬಳಸಿಕೊಳ್ಳಿ" ಎಂದರು. ಮಕ್ಕಳೆಲ್ಲರೂ ಕತೆಯ ಗುಂಗಿನಲ್ಲೇ ಮನೆ ತಲುಪಿದರು.

**ವೇದ**

---

ಓದುಗರಲ್ಲಿ ಮನವಿ

ಶತಮಾನಗಳಿಂದ ತುಳಿತಕ್ಕೊಳಗಾದ ಸ್ತ್ರೀಯರ ಧ್ವನಿಯಾದ ಮಾನವಿ ಪತ್ರಿಕೆಯನ್ನು ಕ್ರಮವಾಗಿ ಪ್ರಕಟಿಸಬೇಕೆಂಬ ಮಹತ್ವಾಕಾಂಕ್ಷೆಯಿಂದ ಪ್ರಾರಂಭಿಸಿದ್ದರೂ, ಆರ್ಥಿಕ ಕಾರಣಗಳಿಂದಾಗಿ ಪತ್ರಿಕೆಯನ್ನು ಕ್ರಮವಾಗಿ ಪ್ರಕಟಿಸಲು ಸಾಧ್ಯವಾಗದೆ ಇರುವುದನ್ನು ನೀವು ಈಗಾಗಲೇ ಗಮನಿಸಿರಬಹುದು.

ನಮ್ಮೆಲ್ಲರ ಪ್ರಾಮಾಣಿಕ ಪ್ರಯತ್ನವನ್ನೂ ಮೀರಿ ಅಡಿಗಡಿಗೆ ಎದುರಾಗುವ ಈ ಸಮಸ್ಯೆಯಿಂದಾಗಿ ಪತ್ರಿಕೆ ತುಂಬಾ ವಿಳಂಬ ಗತಿಯಲ್ಲಿ ಪ್ರಕಟವಾಗುತ್ತಿದೆ. ಪತ್ರಿಕೆಯ ವೆಚ್ಚವನ್ನು ಕಡಿಮೆ ಮಾಡುವ ಉದ್ದೇಶದಿಂದ ಒಂದು ಪುಟ್ಟದಾದ ಅಚ್ಚುಮೊಳೆಯ ಕೇಂದ್ರವನ್ನು ಈಗಾಗಲೇ ಪ್ರಾರಂಭಿಸಿದ್ದೇವೆ. ಇತರ ಖರ್ಚು ವೆಚ್ಚಗಳೊಂದಿಗೆ ಬಾಡಿಗೆಗೆ ಹಣ ಹೊಂದಿಸುವುದು ದುಸ್ತರವಾಗುತ್ತಿದೆ. ಈ ಹಂತದಲ್ಲಿ ಪತ್ರಿಕೆಯ ಆತ್ಮೀಯ ಹಿತೈಷಿಗಳಾದ ನಿಮಗೆ ಈ ಕೆಳಗಿನ ಕಳಕಳಿಯ ಮನವಿಯನ್ನು ಮಾಡುತ್ತಿದ್ದೇವೆ. ಪ್ರತಿ ತಿಂಗಳೂ ಮಾನವಿಯ ಆಫೀಸ್ ಬಾಡಿಗೆಗೆಂದು ರೂ. 5–00 ಕಳಿಸಲು ಸಾಧ್ಯವೆ? ಪ್ರತಿ ತಿಂಗಳೂ ಕಳಿಸುವುದು ಸಮಸ್ಯೆ ಎನಿಸಿದರೆ, ಅರ್ಧ ವರ್ಷದ ಅಂದರೆ ರೂ. 30–00 ಅಥವಾ ಒಂದು ವರ್ಷದ ರೂ. 60–00 ಒಟ್ಟಿಗೆ ಕಳಿಸಬಹುದು. ನಮ್ಮ ಈ ಕಿರು ಪ್ರಯತ್ನಕ್ಕೆ ನಿಮ ಬೆಂಬಲ ಹಾಗೂ ಪ್ರೋತ್ಸಾಹವಿದೆ ಎಂಬ ಭರವಸೆ ನಮಗಿದೆ.

'ಮಾನಸ ತಿಂಗಳ ಪತ್ರಿಕೆ' ಬಳಗ

---

# ಸಿನೆಮಾ    ಮಿಥಿಲೆಯ ಸೀತೆಯರು

"ಮಿಥಿಲೆಯ ಸೀತೆಯರು" ಇತ್ತೀಚಿನ ಕನ್ನಡ ಚಿತ್ರಗಳಲ್ಲಿ ಒಂದು ಉತ್ತಮ ಚಿತ್ರ. ಮಧ್ಯಮ ವರ್ಗದ ಮಹಿಳೆಯರ ಸಮಸ್ಯೆಗಳ ಮೇಲೆ ಅತ್ಯುತ್ತಮವಾಗಿ ಬೆಳಕು ಚೆಲ್ಲುವ ಈ ಚಿತ್ರ ವ್ಯಾಪಾರೀ ಚಲನಚಿತ್ರದ ಅಂಶಗಳನ್ನು ಬಳಸಿಕೊಂಡೂ ಸಹ ಮಹಿಳೆಯರ ಬಗ್ಗೆ ಸೂಕ್ಷ್ಮವಾಗಿ ಸ್ಪಂದಿಸುವಂತಹದು. ಮಧ್ಯಮ ವರ್ಗದಲ್ಲಿನ ತಂದೆ ತನ್ನ ಹೆಣ್ಣು ಮಕ್ಕಳು ದುಡಿಯುವುದನ್ನು ಬಳಸಿಕೊಳ್ಳುತ್ತಾ, ಮನೆತನದ ಅಂತಸ್ತಿನ ಬಗ್ಗೆ ಮಾತನಾಡುತ್ತಾ, ಇಸ್ಪೀಟು, ಜೂಜು ಆಡಿ ಕಾಲ ನೂಕುವವ. ಹೀಗೆ ಪಡ್ಡೆತನದಿಂದ ಕಾಲ ಕಳೆಯುವ ಈತನಿಗೆ ಬೆಳೆದು ನಿಂತ ಇಬ್ಬರು ಹೆಣ್ಣು ಮಕ್ಕಳ ಮದುವೆ ಇತ್ಯಾದಿಗಳೆಲ್ಲ ಮನೆತನದ ಅಂತಸ್ತು ಹೆಚ್ಚಿಸುವಂತೆ ಮಾತನಾಡಿ ಕಾಲ ಕಳೆಯುವ ವಿಚಾರಗಳು ಮಾತ್ರ. ಆತನ ಹೆಂಡತಿಯೇ ಹೇಳುವಂತೆ ದುಡಿಯುವ ಹೆಣ್ಣು ಮಕ್ಕಳನ್ನು ಆಚೆ ಕಳಿಸುವ ಇಷ್ಟವಿಲ್ಲದೆಯೋ ಅಥವ ಉದಾ:ಸೀನತೆಯಿಂದಾಗಿಯೋ, ಮಕ್ಕಳ ಮದುವೆಯ ಬಗ್ಗೆ ಕ್ರಿಯಾತ್ಮಕವಾಗಿ ಯಾವುದೇ ಪ್ರಯತ್ನವನ್ನೂ ಈತ ಮಾಡುವುದಿಲ್ಲ. ಹಿರಿಯ ಮಗಳು ಆರಿಸಿ ತಂದ ಬೇರೆ ಜಾತಿಯ ವರನನ್ನೂ ಸಹ ನಿರ್ದಾಕ್ಷಿಣ್ಯವಾಗಿ ಅಂತಸ್ತಿನ ಹೆಸರಿನಲ್ಲಿ ಆಚೆಗಟ್ಟುತ್ತಾನೆ.

ಸಿನಿಮಾದ ಈ ಅಂಶ ಬಹಳಷ್ಟು ಮಧ್ಯಮವರ್ಗದ ಮಹಿಳೆಯರ ನಿಜ ಸ್ಥಿತಿಯನ್ನು ಪ್ರತಿಬಿಂಬಿಸುತ್ತದೆ. ಆರ್ಥಿಕ ಕಾರಣಗಳಿಂದಲೋ ಅಥವಾ ಹೆಚ್ಚುತ್ತಿರುವ ಮಹಿಳಾ ಪ್ರಜ್ಞೆಯಿಂದಾಗಿಯೋ "ಕೆಲಸ"ದ ಆಯ್ಕೆ ಮಾಡಿಕೊಂಡ ಬಹುಪಾಲು ವಿವಾಹವಾಗಿರದ ಮಹಿಳೆಯರು ಈ ರೀತಿಯ ಸಮಸ್ಯೆಗಳನ್ನು ಎದುರಿಸುತ್ತಲೇ ಇರುತ್ತಾರೆ. ಹೀಗೆ ದುಡಿಯುವ ಹೆಣ್ಣು ಮಕ್ಕಳು — ಒಟ್ಟಿಗೇ ಈ ವ್ಯವಸ್ಥೆಯಲ್ಲಿ ಗಂಡಾಗಿ ಹಾಗೂ ಹೆಣ್ಣಾಗಿ ಬಹುತೇಕ ಜವಾಬ್ದಾರಿ ಹೊರಬೇಕಾದಂತಹ ಹಲವಾರು ಒತ್ತಡಗಳನ್ನು ಕುಟುಂಬದ ರಚನೆ ಹಾಗೂ ಸಮಾಜ ಅವರ ಮೇಲೆ ಹಾಕುತ್ತದೆ. ಮದುವೆ ಇತ್ಯಾದಿಗಳು ಬಂದಾಗ ಮನೆತನದ ಧರ್ಮ, ಗೌರವ ಮುಂತಾದ ಮೌಲ್ಯಗಳಿಗೆ ಹೊಂದಿಕೊಳ್ಳುವತಂಹ ಜೀವನ ನಡೆಸಬೇಕಾದ ಒತ್ತಡ ಹೇರಿದರೆ, ತಮಗೆ ಸೇರದ ಕುಟುಂಬದ ಆಸ್ತಿ, ಮನೆಗಾಗಿ ಇವರು ಆರ್ಥಿಕವಾಗಿ ಜೊತೆಗೆ ಮನೆಗೆಲಸ ನೋಡಿಕೊಳ್ಳುವ ದೈಹಿಕ ಕೆಲಸಗಳನ್ನು ಒಟ್ಟಿಗೇ ಮಾಡಬೇಕಾಗುತ್ತದೆ. ಇಂತಹ ಕುಟುಂಬಗಳಲ್ಲಿ ತಾಯಂದಿರು ಹೆಣ್ಣು ಮಕ್ಕಳಿಗೆ ಜಾತಿ, ಮತ, ವರ್ಗ. ಇತ್ಯಾದಿಗಳನ್ನು ಮೀರಿ ಸಾಕಷ್ಟು ನೆರವಾಗುತ್ತಿರುವುದು ಇಂದಿನ ವಾಸ್ತವಿಕ ಸಂಗತಿ.

ಇಂತಹ ತಾಯಿಯ ಚಿತ್ರಣ "ಮಿಥಿಲೆಯ ಸೀತೆಯರು" ಚಿತ್ರದಲ್ಲಿದೆ. ತಾಯಿಯ ಪಾತ್ರ ಮನೋಜ್ಞವಾಗಿ ನಟಿಸಿರುವ ಬಿ. ವಿ. ರಾಧಾರವರು ಚಿತ್ರಕತೆಯಲ್ಲಿ ಉದ್ದಕ್ಕೂ ಹೆಣ್ಣು ಜೀವನದ ಒಂದು ಸಂಸ್ಕೃತಿಯನ್ನು ಬಿಂಬಿಸುತ್ತಾರೆ.

ಕೊನೆಯ ಹುಡುಗಿಯ ಅತ್ಯಾಚಾರದಲ್ಲಿ ಮೊದಲನೆಯ ಮಗಳಿಗೆ ಲಗ್ನವಾಗುವ ಆಸೆಯೇ ಕಮರಿ ಹೋದರೆ, ಎರಡನೆಯವಳು ಕಾಲ್ಪನಿಕ ಪ್ರಪಂಚದಿಂದ ವಾಸ್ತವಕ್ಕೆ ಕಾಲಿರಿಸುತ್ತಾಳೆ. ಕೊನೆಗೆ ತಂದೆ ಕೂಡ ದುರಂತದ ಹಿನ್ನೆಲೆಯಲ್ಲಿ ತನ್ನಲ್ಲಿನ ಒಳ್ಳೆಯ ಗುಣಗಳಿಗೆ ಶರಣಾಗುತ್ತಾನೆ.

ಇಲ್ಲಿಯ ತಂದೆಯ ಮೌಲ್ಯಗಳು ಕುಟುಂಬದ ನೆಲೆಯಲ್ಲಿನ ಗಂಡಿನ ಮೌಲ್ಯಗಳನ್ನು ಬಿಂಬಿಸಿ, ಪುಟ್ಟ ಹುಡುಗಿಯ ಅತ್ಯಾಚಾರದಲ್ಲಿ ಸಮಾಜದ ಪಾಶವೀ ಗಂಡುಗಳ ಮೌಲ್ಯಗಳನ್ನು ಬಿಂಬಿಸಿ ಒಟ್ಟು ಪಿತೃಪ್ರಧಾನ ಮೌಲ್ಯದ ಅಮಾನವೀಯ ಅಂಶಗಳೆಡೆಗೆ ಈ ಸಿನಿಮಾ ಬೆಳಕು ಚೆಲ್ಲುತ್ತದೆ. ಪಿತೃಪ್ರಧಾನ ಮೌಲ್ಯಗಳ ಅನುಕರಣೆಯೇ ತಮ್ಮ ಆಶಯಗಳಲ್ಲ ಎಂಬುದನ್ನು ಬಹಳಷ್ಟು ದುರಂತದ ನೆಲೆಗಳಿಗೆ ಸಿಕ್ಕ ಈ ಹೆಣ್ಣುಗಳು ಧ್ವನಿಸುತ್ತಾರೆ. ಹಾಗಾಗಿಯೇ ಮದುವೆಯ ಮಾತು ವಂಶ ಬೆಳೆಸುವ ಹಿನ್ನೆಲೆಯಲ್ಲಿ ಮತ್ತೆ ಬಂದಾಗ ಹಿರಿಯವಳು ಹುಟ್ಟಿರುವ ಹೆಣ್ಣು ಮಗು ವಂಶ ಬೆಳೆಸುವುದಾಗಿ ನುಡಿಯುತ್ತಾಳೆ. ಹಾಗೂ ತಮ್ಮ ಪ್ರೀತಿ, ಪ್ರೇಮದ ಆಕರಗಳು ಇಂತಹ ತಬ್ಬಲಿ ತಂಗಿ ಹಾಗೂ ಮಗುವನ್ನು ನೋಡಿಕೊಳ್ಳುವುದಕ್ಕಾಗಿಗಲಿ ಎಂಬರ್ಥದಲ್ಲಿ ನುಡಿಯುತ್ತಾಳೆ. ಇಂತಹ ಕೆಲವು ಸಂಭಾಷಣೆಗಳು ಹಾಗೂ ತಾಯಿಯ ಪಾತ್ರದಲ್ಲಿನ ಮಾತುಗಳು ಹೆಣ್ಣಿನ ಸೂಕ್ಷ್ಮ ಮನಸ್ಸು, ಹಾಗೂ ಸಂಸ್ಕೃತಿಯನ್ನು ಧ್ವನಿಸುತ್ತವೆ. ಹಾಗಾ

ಗಿಯೇ ಸಿನಿಮಾ ಸಂಭಾಷಣೆ ಬರೆದ ಸುರೇಶರವರು ಮಧ್ಯಮವರ್ಗದ ಸೂಕ್ಷ್ಮ ಮನಸ್ಸುಗಳಿಗೆ ತಟ್ಟು ವಂತೆ ಬರೆದಿದ್ದಾರೆ ಎನಿಸುತ್ತದೆ.

ಕನ್ನಡದ ವ್ಯಾಪಾರೀ ಚಲನ ಚಿತ್ರಗಳ ಹಾವಳಿಯಲ್ಲಿ ವ್ಯಾಪಾರೀ ಅಂಶಗಳನ್ನು ಬಳಸಿಕೊಂಡರೂ, ಮಹಿಳೆಯರ ಸಮಸ್ಯೆಗಳ ಮೇಲೆ ಗಂಭೀರವಾಗಿ ಬೆಳಕು ಚೆಲ್ಲುವಂತಹ ಇಂತಹ ಚಿತ್ರಗಳು ಒಟ್ಟು ಸಮಾಜದ ಮೇಲೆ ಪ್ರಭಾವ ಬೀರುವಲ್ಲಿ ಹಾಗೂ ಸಿನೇಮಾ ರಂಗದಲ್ಲಿ ಮಹಿಳೆಯರ ಸಮಸ್ಯೆಗಳನ್ನು ವಿಶ್ಲೇಷಿಸುವಲ್ಲಿ ಸತ್ ಸಂಪ್ರದಾಯ ಹಾಕುವಲ್ಲಿ ಯಶಸ್ವಿಯಾಗಬಹುದು.

ಆ. ಚೆ. ಪ.

## ಪ್ರತಿಭಾನ್ವಿತ ಕಲಾವಿದೆ ಬಿ. ಜಯಮ್ಮ ಇನ್ನಿಲ್ಲ

ಕುಟುಂಬದ ಪ್ರೋತ್ಸಾಹ ಹಾಗೂ ಬೆಳೆದು ಬಂದ ಪರಿಸರದ ಕಾರಣದಿಂದ ಬೆಳಕಿಗೆ ಬಂದ ಕೆಲವು ರಂಗನಟಿಯರಲ್ಲಿ ಬಿ. ಜಯಮ್ಮನವರೂ ಒಬ್ಬರು. ಈಕೆ ನಾಟಕಗಳಲ್ಲಿ ಮಾತ್ರವಲ್ಲ, ಕನ್ನಡ ಚಲನಚಿತ್ರದ ಪ್ರಾರಂಭಿಕ ದೆಸೆಯಲ್ಲಿ ಪ್ರಮುಖ ಚಲನಚಿತ್ರ ನಟಿಯಾಗಿ ಸೇವೆ ಸಲ್ಲಿಸಿದ್ದಾರೆ.

ಜಯಮ್ಮನವರ ತಾಯಿ ಕಲಾಭಿಮಾನಿ, ಆಕೆಯ ಅಜ್ಜಿ, ದೊಡ್ಡಮ್ಮನವರೂ ನಾಟಕಗಳಲ್ಲಿ ಪಾತ್ರ ಮಾಡುತ್ತಾ ಪ್ರಮುಖ ನಟಿಯೆನಿಸಿದ್ದರು. ಹೀಗಾಗಿ ಜಯಮ್ಮನವರಿಗೆ ನಾಟಕ ಕಂಪನಿಗಳ ಸಖ್ಯ ಬಾಲ್ಯದಿಂದಲೇ ಇತ್ತು. ಜಯಮ್ಮನವರಿಗೆ 9 ವರ್ಷಗಳಾಗಿದ್ದಾಗ "ಬೆಂಗಳೂರಿನ ರಸಿಕ ಜನಾನಂದ" ಎಂಬ ನಾಟಕದ ಕಂಪನಿಯಿಂದ ಪಾತ್ರಕ್ಕೆ ಕರೆ ಬಂತು, ಈಕೆಗೆ ಆಸಕ್ತಿ, ಆಸೆ ಇದ್ದರೂ ತಾಯಿ ಏನೆನ್ನುವರೋ ಎಂಬ ಅತಂಕವಿತ್ತು. ತಾಯಿಯೂ ಒಪ್ಪಿಗೆ ಕೊಟ್ಟರು. "ಸೀತಾ ಸ್ವಯಂವರ" ನಾಟಕದಲ್ಲಿ ತಮಗೆ ರಾಣಿ ಪಾತ್ರ ಎಂದು ತಿಳಿದಾಗ ಹಿಗ್ಗಿಗೆ ಎಲ್ಲೆ ಇರಲಿಲ್ಲ, ಆದರೆ ಮಾತೇ ಇಲ್ಲದ 2 — 3 ನಿಮಿಷಗಳ ಪಾತ್ರವದು, ಆದರೂ ಜಯಮ್ಮ ಧೈರ್ಯದಿಂದ ಮೊದಲ ಪಾತ್ರ ನಿರ್ವಹಣೆಯಲ್ಲೇ 'ಶಹಬ್ಬಾಸ್' ಎನಿಸಿಕೊಂಡರು. 'ಒಳ್ಳೆಯ ಕಲಾವಿದೆಯಾಗುತ್ತೀಯ' ಎಂದ ಹಿರಿಯರ ನುಡಿ ನಿಜವಾಯಿತು.

ಸ್ತ್ರೀ ಪಾತ್ರಗಳನ್ನೂ ಗಂಡಸರೇ ಹೆಚ್ಚಾಗಿ ಮಾಡುತ್ತಿದ್ದ ಕಾಲದಲ್ಲಿ ಈಕೆ ರಂಗ ಪ್ರವೇಶ ಮಾಡಿದರು. ಜಯಮ್ಮ ಗುಬ್ಬಿ ಕಂಪೆನಿಗೆ ಸೇರುವುದಕ್ಕೆ ಮೊದಲು ಬೇರೆ ಬೇರೆ ಕಂಪನಿಗಳಲ್ಲೂ ನಾಟಕಗಳಲ್ಲಿ ಅಭಿನಯಿಸಿದ್ದರು. ಈಕೆಯ ಸೌಂದರ್ಯ, ಕಂಠ ಮಾಧುರ್ಯದ ಬಗ್ಗೆ ಪ್ರಶಂಸೆಯನ್ನು ಕೇಳಿದ ವೀರಣ್ಣನವರು ಈಕೆಯನ್ನು ತಮ್ಮ ಕಂಪನಿಗೆ ಆಹ್ವಾನಿಸಿದ್ದರು. ಆಗ ಜಯಮ್ಮನವರಿಗೆ 13 ವರ್ಷಗಳು. 16 ರ ವಯಸ್ಸಿನಲ್ಲಿ ಪ್ರಮುಖ ಪಾತ್ರಗಳನ್ನು ಮಾಡಲು ಪ್ರಾರಂಭಿಸಿದ ಜಯಮ್ಮ 'ದಶಾವತಾರ, ಕುರುಕ್ಷೇತ್ರ, ಗುಲೇಬಕಾವಲಿ, ಸದಾರಮೆ' ಇತ್ಯಾದಿ ನಾಟಕಗಳಲ್ಲಿ ಪ್ರಮುಖ ಪಾತ್ರಗಳನ್ನು ಮಾಡಿದರು. ಈ ಪಾತ್ರಗಳನ್ನು ಮಾಡಿದರೆ ಜಯಮ್ಮ ಮಾಡಿದಂತಿರಬೇಕು ಎಂಬ ಕೀರ್ತಿಯನ್ನು ಪಡೆದರು, ಮುಂದೆ ತಮ್ಮ ಪ್ರತಿಭಾವಂತಿಕೆಯಿಂದ ಉತ್ತಮ ಅಭಿನೇತ್ರಿ ಎಂದು ಹೆಸರಾದರು.

ಅಶಕ್ತ ಕಲಾವಿದರ ಕಲ್ಯಾಣ ಸಂಘದ ಅಧ್ಯಕ್ಷೆ ಮತ್ತು ಸಮಾಜ ಸೇವಕಿಯೂ ಆದ ಜಯಮ್ಮನವರು, ತಮ್ಮ ಕೈಲಾದ ಸಹಾಯವನ್ನು ಮಾಡುವ ಪ್ರಸಂಗವನ್ನು ತಪ್ಪಿಸಿಕೊಂಡವರಲ್ಲ. 1948ರಲ್ಲಿ ಗಾಂಧೀಜಿಯವರನ್ನು ಕಾಣಲು ಹೋದಾಗ ಅಲ್ಲಿಯೇ ಇದ್ದ ಪ್ರೊಡಕ್ಷನ್ ಮ್ಯಾನೇಜರ್ ತ್ಯಾಗಯ್ಯ ಈಕೆಯ ಬಗ್ಗೆ ಹೇಳಿದಾಗ ಗಾಂಧೀಜಿಯವರು 'ಸಮಾಜ ಸೇವೆ ಮಾಡು' ಎಂದ ಮಾತನ್ನು ನೆನಪಿಟ್ಟುಕೊಂಡು ಅದರಂತೆ ನಡೆದವರು. ಅಶಕ್ತ ಕಲಾವಿದರಿಗೆ, ಬಡವರಿಗೆ ಎಂದು ತಮ್ಮ ಕೈಲಾದ ಸೇವೆ ಸಲ್ಲಿಸಿದ್ದಾರೆ. ಹೆಣ್ಣುಮಕ್ಕಳು ಓದಿ ತಮ್ಮ ಕಾಲ ಮೇಲೆ ನಿಲ್ಲಬೇಕು ಮತ್ತು ವರದಕ್ಷಿಣೆ ಇಲ್ಲದೆ ಮದುವೆಯಾಗುವುದಾಗಿ ಪಣ ತೊಡಬೇಕು ಎಂಬ ಅಭಿಪ್ರಾಯ ಇವರದು. ಸಿನಿಮಾ ಪ್ರಪಂಚದಲ್ಲಿ ಹೇಗಾದರೂ ಹೆಸರು ಮಾಡಬೇಕು ಎಂಬ ಆಸೆಯಿಂದ ಬರುವ ಹೆಣ್ಣುಮಕ್ಕಳಿಂದಾಗಿ ಹಾಗೂ ಹೇಗಾದರೂ ದುಡ್ಡು ಮಾಡಬೇಕು ಎಂಬ ಧ್ಯೇಯವಿಟ್ಟುಕೊಂಡ ನಿರ್ಮಾಪಕರುಗಳಿಂದಾಗಿ ಇಂದು ಸಿನಿಮಾಗಳಲ್ಲಿ ಸ್ತ್ರೀಯರನು ಕೀಳಾಗಿ ಚಿತ್ರಿಸುತ್ತಾರೆ ಎನ್ನುತ್ತಿದ್ದ ಜಯಮ್ಮನವರು, ಕಾಲಕ್ಕೆ ತಕ್ಕಂತೆ ಬದಲಾಗಬೇಕು. ಆದರೂ ತಮ್ಮತನವನ್ನು ಇಟ್ಟುಕೊಂಡು ಗಂಭೀರ ಪಾತ್ರಗಳನ್ನು ಮಾಡಲು ಪ್ರಯತ್ನಿಸ ಬೇಕು ಎನ್ನುತಿದ್ದರು. ಇದೇ ರೀತಿ ತಮ್ಮ ಕಲಾಜೀವನವನ್ನು ಕಳೆದ ಜಯಮ್ಮನವರಿಗೆ ಕರ್ನಾಟಕ ಸರ್ಕಾರ 1980 ರಲ್ಲಿ ಎಂ. ಎಲ್. ಸಿ. ಯಾಗಿ ನಾಮಕರಣ ಮಾಡಿ ಅವರನ್ನು ಗೌರವಿಸಿತು. ಈಗ ನಮ್ಮ ನಡುವೆ ಇಲ್ಲದಿದ್ದರೂ ಜಯಮ್ಮನವರು ಕಲಾ ಪ್ರಪಂಚದಲ್ಲಿ ಚಿರ ತಾರೆಯಾಗಿದ್ದಾರೆ. ಅವರ ಸಾವಿಗೆ ಮಾನಸ ತಿಂಗಳ ಪತ್ರಿಕೆ ಬಳಗವು ವಿಷಾದಿಸುತ್ತದೆ.

## ರಾಜಕೀಯ

## ಬೇನಜೀರ್ ಭುಟ್ಟೋ

ಬೇನಜೀರ್ ಭುಟ್ಟೊ ಪ್ರಪಂಚದ ಅತ್ಯಂತ ಕಿರಿಯ ಪ್ರಧಾನಿ. ವಿಶೇಷವಾಗಿ ಇಸ್ಲಾಂ ರಾಷ್ಟ್ರವೊಂದರ ಪ್ರಥಮ ಪ್ರಧಾನಿ. ಮುಸ್ಲಿಂ ದೇಶಗಳಲ್ಲಿ ಮಹಿಳೆಯರ ಮೇಲೆ ಹೇರುವ ಎಲ್ಲ ಸಂಪ್ರದಾಯಬದ್ಧ ನಿಯಮಗಳಿಗೂ ಇಂದು ಸವಾಲಾಗಿದ್ದಾರೆ. ತೃತೀಯ ಜಗತ್ತಿನ ಒಬ್ಬ ಮಹಿಳೆ ಮುಸ್ಲಿಂ ದೇಶವನ್ನು ಪ್ರಧಾನಿಯಾಗಿ ಪ್ರತಿನಿಧಿಸುತ್ತಿರುವುದು ಅತ್ಯಂತ ಗಮನಾರ್ಹ ಸಂಗತಿ. ಡಿಸೆಂಬರ್ 2ರಂದು ಪ್ರಪಂಚದ 5ನೇ ಮಹಿಳಾ ಪ್ರಧಾನಿ ಹಾಗೂ ಪಾಕಿಸ್ತಾನದ 11ನೆಯ ಪ್ರಧಾನಿಯಾಗಿ 35 ವರ್ಷದ ಬೇನಜೀರ್ ಭುಟ್ಟೋ ಪ್ರಮಾಣ ವಚನ ಸ್ವೀಕರಿಸಿದರು.

41 ವರ್ಷಗಳಿಂದೀಚೆಗೆ ಪಾಕ್‌ನಲ್ಲಿ ಶಾಂತಿಯುತವಾಗಿ ಅಧಿಕಾರ ಹಸ್ತಾಂತರವಾದದದ್ದು ಇದೇ ಪ್ರಥಮ.

ತಂದೆ ಜುಲುಫಿಕರ್ ಆಲಿ ಭುಟ್ಟೋರಂತೆಯೇ ಜನರನ್ನು ಆಕರ್ಷಿಸುವ ವ್ಯಕ್ತಿತ್ವ ಹೊಂದಿದ ಬೇನಜೀರ್ ಭುಟ್ಟೋ ತಂದೆಯ ಪ್ರಧಾನಿ ಹುದ್ದೆಯ ಉತ್ತರಾಧಿಕಾರಿಯಾಗಿ 11 ವರ್ಷಗಳ ನಂತರ ಅಧಿಕಾರ ಪಡೆದರು. ಕೇಂಬ್ರಿಡ್ಜ್‌ನ ವಿದ್ಯಾರ್ಥಿನಿಯಾಗಿದ್ದ ಈಕೆ ಉತ್ತಮ ನಾಯಕಿ ಮಾತ್ರವಲ್ಲ, ಮಾತುಗಾತಿ, ಇನ್ನೊಬ್ಬರ ಅಭಿಪ್ರಾಯಕ್ಕೂ ಮಾನ್ಯತೆ ನೀಡುವಾಕೆ, 11 ವರ್ಷಗಳ ಹಿಂದೆ ತಮ್ಮ ತಂದೆಗೆ ಸೇನಾನಿ ಜಿಯಾ ಉಲ್‌ಹಕ್‌ರವರಿಂದ 'ಫಾಸಿ ಶಿಕ್ಷೆ' ಯಾದ ಸಂದರ್ಭದಲ್ಲಿ ವಿದೇಶದಿಂದ ಬಂದವರು. ಸೆರೆವಾಸ, ಗೃಹಬಂಧನ, ಕೊಲೆ, ಪ್ರಾಣಭಯ ಹೀಗೆ ಕಷ್ಟಗಳ ಸರಮಾಲೆಯನ್ನೇ ಎದುರಿಸಿದವರು. ಆಗಸ್ಟ್ 17 ರಂದು ಜಿಯಾ ಉಲ್‌ಹಕ್‌ರವರು ವಿಮಾನಾಪಘಾತದಲ್ಲಿ ನಿಧನರಾದರು. ಅವರ ನಿಧನ ಪಾಕ್ ಜನತೆಗೆ ಸೇನಾಡಳಿತದಿಂದ ಬಿಡುಗಡೆಯನ್ನು, ಬೇನಬೇರ್‌ರವರಿ ಉತ್ತಮ ಅವಕಾಶವನ್ನು ಒದಗಿಸಿತು. ಚುನಾವಣೆಗಿಳಿದಾಗ ಬೇನಜೀರ ಭುಟ್ಟೋ ತುಂಬು ಗರ್ಭಿಣಿ. ಬಸಿರು, ಬಾಣಂತನ, ತಾಯ್ತನಗಳ ನಡುವೆ ರಾಜಕೀಯದ ಸವಾಲುಗಳನ್ನು ಎದುರಿಸಿದ ದಿಟ್ಟ ಮಹಿಳೆ.

ಬೇನಜೀರ್ ಭುಟ್ಟೋರವರ ಮೇಲೆ ಜನರಿಗಿದ್ದ ಅಪಾರ ವಿಶ್ವಾಸದಿಂದಲೇ, ಜೊತೆಗೆ ಅನುಕಂಪವೂ ಸೇರಿರಬಹುದು. ಜಿಯಾರವರ ಮಂದಿ ಚುನಾವಣೆಯಲ್ಲಿ ಏನೆಲ್ಲ ಮಾಡಿದರೂ ಆಕೆಯ ಪಕ್ಷಕ್ಕೆ ನಿಚ್ಚಳ ಬಹುಮತವಲ್ಲದಿದ್ದರೂ, ಉಳಿದೆಲ್ಲ ಪಕ್ಷಗಳಿಗಿಂತಲೂ ಹೆಚ್ಚಿನ ಸ್ಥಾನ ದಕ್ಕಿತ್ತು. ಆದರೂ ತಮ್ಮ ಮುತ್ಸದ್ದಿತನದಿಂದ ತಮ್ಮ ಪಕ್ಷಕ್ಕೆ ಅಧಿಕಾರದಕ್ಕುವಂತೆ ಮಾಡಿದರು. ಇದಕ್ಕೆ ಅವರು ತೆತ್ತಬೇಕಾದ ಬೆಲೆ - ಸೇನೆಗೂ ಅಧಿಕಾರದಲ್ಲಿ ಪಾಲು ಮತ್ತು ತಾವು ಬಹಳವಾಗಿ ವಿರೋಧಿಸುತ್ತಿದ್ದ ಅಮೇರಿಕನ್ನರ ಸಖ್ಯ.

ಪಾಕ್ ಪ್ರಧಾನಿಯಾಗಿ ಮಾಡಿದ ತಮ್ಮ ಪ್ರಥಮ ಭಾಷಣದಲ್ಲಿ ಬೇನಜೀರ್ ಭುಟ್ಟೋ ಜನಸಾಮಾನ್ಯರ ಬೇಡಿಕೆ, ಮತ್ತು ತಮ್ಮ ಪಕ್ಷದ ಪ್ರಮುಖ ಆಶ್ವಾಸನೆಯಾದ, ಎಲ್ಲರಿಗೂ ಊಟ, ವಸತಿ, ಬಟ್ಟೆ ದೊರಕುವಂತೆ ಮಾಡುವುದು, ಪತ್ರಿಕಾ ಸ್ವಾತಂತ್ರ್ಯ, ಸುದ್ದಿ ಮಾಧ್ಯಮಗಳಿಗೆ ಸ್ವಾಯುತ್ತತೆ, ರಾಜಕೀಯ ಬಂದಿಗಳ ಬಿಡುಗಡೆ, ಪರದೇಶಗಳೊಂದಿಗೆ ಸ್ನೇಹ ಸಹಕಾರ, ಶಾಂತಿಯುತ ಸಂಬಂಧವಿರಿಸಿಕೊಳ್ಳುವುದು. ಪ್ರಮುಖವಾಗಿ ಸ್ತ್ರೀಯರಿಗೆ ಸಮಾನ ಹಕ್ಕುಗಳ ಜಾರಿ ಮುಂತಾದ ವಿಷಯಗಳಲ್ಲಿ ಆಸಕ್ತಿ ತೋರಿದ್ದಾರೆ. ವಿಶೇಷವಾಗಿ ಭಾರತ-ಪಾಕ್ ನಡುವಣ ಸ್ನೇಹ ಸುಗಮವಾಗಿರುವಂತೆ ಕಂಡುಬಂದಿದೆ. 6 ವರ್ಷಗಳ ಹಿಂದಿನ 'ಸಿಮ್ಲಾ ಒಪ್ಪಂದ'ಕ್ಕೆ ತಾವು ಬದ್ಧವಾಗಿರುವುದಾಗಿ ಬೇನಜೀರ್ ಭುಟ್ಟೋ ನುಡಿದಿದ್ದಾರೆ. ಪಂಜಾಬಿನ ಭಯೋತ್ಪಾದಕರಿಗೆ ತಮ್ಮ ದೇಶದಲ್ಲಿ ಯಾವ ಸ್ಥಾನವೂ ಇಲ್ಲವೆಂದು ಖಡಾಖಂಡಿತವಾಗಿ ಸಾರಿದ್ದಾರೆ. ಅಮೇರಿಕವನ್ನು ಮೊದಲು ವಿರೋಧಿಸುತ್ತಿದ್ದ ಭುಟ್ಟೋರವರು ಈಗ ಅಮೇರಿಕದ ನೆರವು, ರಷ್ಯಾದ ಗೆಳೆತನ, ಕೊಲ್ಲಿ ರಾಷ್ಟ್ರಗಳ ಸ್ನೇಹಗಳತ್ತ ಗಮನಹರಿಸಿದ್ದಾರೆ.

ಇತ್ತೀಚಿಗೆ ನಡೆದ ಸಾರ್ಕ್ ಶೃಂಗಸಭೆಯಲ್ಲಿ ಭಾರತ ಮತ್ತು ಪಾಕಿಸ್ತಾನಗಳ ನಡುವೆ ಕೆಲವು ಒಪ್ಪಂದಗಳಾದವು. ಕಾಶ್ಮೀರ ಗಡಿ ಸಮಸ್ಯೆ ಇನ್ನೂ ತೀರ್ಮಾನವಾಗಿಲ್ಲವಾದರೂ, ವ್ಯಾಪಾರ, ಸಾಂಸ್ಕೃತಿಕ ಸಂಬಂಧಗಳ ಬಗ್ಗೆ ಒಪ್ಪಂದಗಳಾದವು ಮತ್ತು ಇವೆರಡು ದೇಶಗಳಲ್ಲಿ ಒಂದು ದೇಶದ ಪರಮಾಣು ಶಕ್ತಿ ಘಟಕದ ಮೇಲೆ ಮತ್ತೊಂದು ದೇಶ ದಾಳಿ ಮಾಡಬಾರದು ಎಂಬುದೂ ಒಂದು. ಶಾಂತಿಯುತ ಅಣುಶಕ್ತಿ ಯೋಜನೆಗಳಲ್ಲಿ ತಮಗೆ ನಂಬಿಕೆ ಎಂದಿರುವ ಬೇನಜೀರ್ ಭುಟ್ಟೋ ತಮ್ಮೆಲ್ಲ ಯೋಜನೆಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ಎಷ್ಟು ಸಫಲರಾಗುತ್ತಾರೆ ಎಂಬುದನ್ನು ತೃತೀಯ ಜಗತ್ತು ಮಾತ್ರವಲ್ಲ ಇಡೀ ವಿಶ್ವವೇ ಕಾದುನೋಡುತ್ತಿದೆ.

---

## ಮುನ ( ಮುನಿರತ್ನ )

ಕಾಡುಗೋಡಿಯ ಈ ಅಮಾಯಕ ಹುಡುಗಿ ಸಾವನ್ನಪ್ಪಿದ್ದು ತೀರಾ ವಿಚಿತ್ರವಾಗಿ. 22 ವರ್ಷಗಳಲ್ಲಿ ಈ ಹುಡುಗಿ ಕಂಡ ಬದುಕಿನ ಏರಿಳಿತಗಳಲ್ಲಿ ಕಷ್ಟಗಳ ಸರಮಾಲೆಗಳು ಕೋಟಿ. ಕಿತ್ತು ತಿನ್ನುವ ಬಡತನ, ಗಂಡನಿಂದ ಬೇರ್ಪಡೆ, ದೈಹಿಕ ಶೋಷಣೆ ಇತ್ಯಾದಿಗಳಲ್ಲಿ ಈ ಹುಡುಗಿ ನಿಜವಾಗಿ ಹುಚ್ಚಿಯಾದಳೋ, ಅಥವಾ ತನ್ನೆಲ್ಲಾ ಆಸೆಗಳಿಗೆ ಹುಚ್ಚುತನದಲ್ಲಿ ಅಭಿವ್ಯಕ್ತಿ ಕಂಡುಕೊಂಡಳೋ ತಿಳಿಯದು. 'ಮಾನಸ' ಬಳಗದ ನಾವೆಲ್ಲರೂ ಕಂಡ ಹುಡುಗಿ ಈಕೆ. ನಮ್ಮ ಪ್ರೆಸ್‌ನಲ್ಲಿ ಕೆಲಸಮಾಡಿ ಏನೋ ಕಲಿತುಕೊಳ್ಳಲಿ ಎಂದು ಆಸೆ ಪಟ್ಟೆವು. ಬೇರೆ ಯಾವುದಾದರೂ ಕೆಲಸ ಕೊಡಿಸಬಹುದೇನೋ ಎಂದುಕೊಂಡೆವು. ಈ ತರಹೆಯ ಆಮಿಷಗಳಿಗೆ ಆಕೆಯ ಮನಸ್ಸು ಒಲಿಯಲಿಲ್ಲ. ಕಾಡುಗೋಡಿಯ ರಸ್ತೆ, ಅಂಗಡಿಗಳಲ್ಲಿ, ಯಾರ್ಯಾರ್ಯದೋ ಮನೆಯಲ್ಲಿ ಕೂಗುತ್ತಾ, ಹಾಡುತ್ತಾ ವಿಚಿತ್ರವಾಗಿ ಅಲಂಕಾರ ಮಾಡಿಕೊಂಡು ತಿರುಗ ತೊಡಗಿದ ಈ ಹುಡುಗಿಯ ವರ್ತನೆ ಎಲ್ಲರಿಗೂ ಒಂದು ಸಾರಿ ಬೇಸರವಾದರೆ ಮತ್ತೊಂದು ಸಾರಿ ಮರುಕವಾಗುತ್ತಿತ್ತು. ನಮ್ಮಂತಹವರು ಆಕೆಯನ್ನು ನಮ್ಮ ಅಕ್ಕ - ತಂಗಿಯೋ ಎನ್ನುವಷ್ಟು ಜವಾಬ್ದಾರಿ ತೆಗೆದುಕೊಂಡು ಆಸ್ಪತ್ರೆ ಇತ್ಯಾದಿಗಳಿಗೆ ಓಡಾಡಿದ್ದರೆ, ಈ ಹುಡುಗಿಯ ಬದುಕನ್ನ ಸರಿಪಡಿಸಬಹುದಿತ್ತೇನೋ. ? ಬಹುಶಃ ನಮ್ಮಂತಹ ಮಧ್ಯಮ ವರ್ಗದವರಿಗೆ ಹಣ, ಸಮಯ ಇತ್ಯಾದಿಗಳು ಕಡಿಮೆಯೋ ಅಥವಾ ಅದು ನಮ್ಮ ಸಮರ್ಥನೆಯೋ? ಹೀಗೆ ಈ ವಿಕಾರತೆಯಿಂದಾಗಿ ಆಕೆಯ ಹತ್ತಿರದ ಸಂಬಂಧಿಕರಿಂದ ಆಕೆಯ ಕೊಲೆ ನಡೆಯಿತೋ ಅಥವಾ ಕೈ ಕಾಲು ಕಟ್ಟಿ ತೂಗುಹಾಕಿದ ಕುಣಿಕೆಯಲ್ಲಿ ಸಿಕ್ಕಿಕೊಂಡಳೋ? ಅಂತೂ 24 - 1 - 89 ರಂದು ತನ್ನ ಹುಚ್ಚುಮನಸ್ಸಿನ ಜೀವಕೆ ಅಂತಿಮ ಪರದೆ ಎಳೆದಳು ( ಎಳೆದರೊ ? ) ಹುಚ್ಚು ನಾಯಿಯು ಹೊಡೆತಕ್ಕೆ ಬಲಿಯಾಗಿ ಸಾಯುವ ಹಾಗೆ. ನಮ್ಮಂತಹ ಮಧ್ಯಮ ವರ್ಗದವರ 'ಸಿಂಪಥಿ' ಗಳು ಕೆಲಸಕ್ಕೆ ಬಾರದವೇನೋ ಎಂಬ ಪಾಪ ಪ್ರಜ್ಞೆಯ ಜೊತೆಗೆ ,ಆಕೆಯ ಸಾವಿನ ನೋವು ನಮ್ಮ ಎದೆಯಲ್ಲೊಂದು ಕಪ್ಪು ಚುಕ್ಕೆಯಾಗಿದೆ.

# ಸುದ್ದಿ ಸಂಕಲನ

## ಅಭಿವೃದ್ಧಿ ನಿಗಮ

ರಾಜ್ಯದ ಮಹಿಳೆಯರಿಗೆ ಸ್ವಂತ ಉದ್ಯಮ ಸ್ಥಾಪಿಸಲು ನೆರವಾಗುವ ಉದ್ದೇಶದ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ಇತ್ತೀಚೆಗೆ ಅಸ್ತಿತ್ವಕ್ಕೆ ಬಂದಿದೆ. ಮಹಿಳೆಯರ ಸಣ್ಣ ಉದ್ಯಮ ಸಾಲಕ್ಕೆ ನಿಗಮ ಜಾಮೀನು ನೀಡುತ್ತದೆ. ತರಬೇತಿ, ಉದ್ಯಮಸ್ಥಾಪನೆಗೆ ನೆರವು ಹಾಗೂ ಮಾರುಕಟ್ಟೆ ಸೌಲಭ್ಯವನ್ನು ಇದು ಒದಗಿಸುತ್ತದೆ.

## ಮಹಿಳಾ ಪೈಲಟ್

ರಾಯ್‌ಬರೇಲಿಯಲ್ಲಿರುವ ಇಂದಿರಾ ಗಾಂಧಿ ರಾಷ್ಟ್ರೀಯ ಅಕಾಡೆಮಿಯಲ್ಲಿ ಕಮರ್ಶಿಯಲ್ ಪೈಲಟ್ ಶಿಕ್ಷಣ ಮುಗಿಸಿದ ಹರ್‌ಪ್ರೀತ್ ಅಹ್ಲುವಾಲಿಯಾ ಅವರು ಏರ್‌ಇಂಡಿಯಾದ ಪ್ರಥಮ ಮಹಿಳಾ ಪೈಲಟ್ ಆಗಿ ಇತ್ತೀಚೆಗೆ ಆಯ್ಕೆಯಾಗಿದ್ದಾರೆ.

## ಆಸ್ತಿಯಲ್ಲಿ ಸಮಪಾಲು

ಆಸ್ತಿಯಲ್ಲಿ ಮಹಿಳೆಗೆ ಸಮಪಾಲಿನ ಅವಕಾಶ ನೀಡುವ ಶಾಸನ ಮಸೂದೆಯನ್ನು ವಿಧಾನಮಂಡಲದಲ್ಲಿ ಸಧ್ಯದಲ್ಲೇ ಮಂಡಿಸಲುಗುವುದು ಎಂದು ಕರ್ನಾಟಕ ಸರಕಾರ ಇತ್ತೀಚೆಗೆ ಪ್ರಕಟಣೆ ನೀಡಿದೆ. ಇದರ ಕರಡು ಮಸೂದೆ ಸಿದ್ಧವಾಗಿದ್ದು, ಸಾರ್ವಜನಿಕ ಅಭಿಪ್ರಾಯ ಸಂಗ್ರಹಿಸಲಾಗುತ್ತಿದೆ ಎಂದೂ ಹೇಳಲಾಗಿದೆ.

## ವರದಕ್ಷಿಣೆ ಸಾವು

1987ರ ಅವಧಿಯಲ್ಲಿ ರಾಷ್ಟ್ರದಂತ ಸುಮಾರು 3000 ವರದಕ್ಷಿಣೆ ಸಾವುಗಳು ಸಂಭವಿಸಿವೆ. ಹೆಚ್ಚಿನ ಸಾವುಗಳು ಮಹಾರಾಷ್ಟ್ರ ಮತ್ತು ದೆಹಲಿ ನಗರಗಳಲ್ಲಾಗಿವೆ.

## ಅಪ್ರಾಪ್ತ ವಯಸ್ಸಿನ ವಿವಾಹ

ಕರ್ನಾಟಕದ ಗ್ರಾಮೀಣ ಪ್ರದೇಶದ ಶೇ. 86 · 4ರಷ್ಟು ಹೆಣ್ಣುಮಕ್ಕಳಿಗೆ 18 ವರ್ಷ ತುಂಬುವ ಮೊದಲೇ ವಿವಾಹವಾಗುತ್ತಿದ್ದೆ ಎಂದು ಭಾರತದ ಕುಟುಂಬ ಕಲ್ಯಾಣ ಯೋಜನೆ ಪ್ರತಿಷ್ಠಾನ ನಡೆಸಿದ ಅಧ್ಯಯನದ ವರದಿ ತಿಳಿಸಿದೆ.

ಶೇ. 48 · 1 ರಷ್ಟು ಹಳ್ಳಿಗಾಡಿನ ಮಹಿಳೆಯರು 18 ವರ್ಷಕ್ಕೆ ಮೊದಲೇ ಗರ್ಭಿಣಿಯರಾಗಿದ್ದಾರೆ. ನಗರ ಪ್ರದೇಶಗಳಲ್ಲಿ 18 ವರ್ಷಕ್ಕಿಂತ ಕಡಿಮೆ ವಯಸ್ಸಿನ ವಿವಾಹಿತ ಮಹಿಳೆಯರ ಸಂಖ್ಯೆ ಶೇ. 63 · 6 ರಷ್ಟು, ಇದರಲ್ಲಿ 18 ವರ್ಷಕ್ಕೆ ಮೊದಲೇ ಬಸಿರಿಯರಾದವರ ಪ್ರಮಾಣ ಶೇ. 35 · 5ರಷ್ಟು.

## ಕಾರ್ಮಿಕ ಕಾನೂನು

ಸ್ವಯಂ ಉದ್ಯೋಗಸ್ಥ ಮಹಿಳೆಯರ ಬಗ್ಗೆ ಕಾರ್ಮಿಕ ಕಾನೂನಿನಲ್ಲಿ ಸಮರ್ಪಕ ವಿವರಣೆ ಇಲ್ಲದಿರುವುದು, ಈ ಕ್ಷೇತ್ರದ ಮಹಿಳೆಯರ ದುಃಸ್ಥಿತಿಗೆ ಮೂಲಕಾರಣ.

ಅಸಂಘಟಿತ ಕ್ಷೇತ್ರದ ಹಾಗೂ ಸ್ವಯಂ ಉದ್ಯೋಗದ ಮಹಿಳೆಯರ ರಾಷ್ಟ್ರೀಯ ಆಯೋಗ ಇತ್ತೀಚೆಗೆ ನೀಡಿರುವ ವರದಿಯಲ್ಲಿ ಈ ಅಭಿಪ್ರಾಯ ವ್ಯಕ್ತವಾಗಿದೆ. ಕಾನೂನಿನಲ್ಲಿ ಮಹಿಳಾ ಕಾರ್ಮಿಕರಿಗಿರುವ ಅವಕಾಶಗಳು ಸ್ಪಷ್ಟವಾಗಿಲ್ಲ, ಅಲ್ಲದೆ ಕಾನೂನು ಅನುಷ್ಠಾನ ಮಾಡುವ ಆಡಳಿತ ಯಂತ್ರವೂ ಈ ಬಗ್ಗೆ ಉದಾಸೀನ ನಿಲುವು ತಳೆದಿದೆ ಎಂದು ವರದಿ ಆರೋಪಿಸಿದೆ.

ಮಾನಸ ಮುದ್ರಣ

---



# ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ, ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ.

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ.

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ.

ವಿಳಾಸ : **"ಮಾನಸ"**
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು–**560067**

**ಸೂಚನೆ :**
ವಾರ್ಷಿಕ ಚಂದಾ : **15** ರೂ.
ಆಜೀವ ಚಂದಾ: **250** ರೂ.
ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು
ಹಣವನ್ನು ಬ್ಯಾಂಕ್ ಡ್ರಾಫ್ಟ್. ಎಂ. ಓ.
ಮೂಲಕ ಸ್ವೀಕರಿಸಲಾಗುವುದು.